# ಕೊಡಗು  ಸಂಗಾತಿ

ಪಾಕ್ಷಿಕ ಪತ್ರಿಕೆ

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೮ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

.R. N. N. 240 ಸಂಪುಟ : 3 ಸಂಚಿಕೆ : 14 ಜುಲೈ 16 ರಿಂದ 31, 1999. ಪುಟಗಳು : 24 ಬೆಲೆ ರೂ. : 5-00

ಡ್ರಾಸ್ ವಲಯದ ಟೈಗರ್ ಹಿಲ್ಸ್ ಅನ್ನು ಪಾಕ್ ಅತಿಕ್ರಮಣಕಾರರಿಂದ ವಶಪಡಿಸಿಕೊಂಡ ನಂತರ ವಿಜಯೋತ್ಸಾಹ ಆಚರಿಸುತ್ತಿರುವ 2ನೇ ರಾಜ್ ಇನ್‌ಫೆಂಟ್ರಿಯ ವೀರಾಧಿ ವೀರರು.








ಕಾರ್ಗಿಲ್ ಕಾರ್ಯಾಚರಣೆಯಲ್ಲಿ ಪ್ರಾಣತೆತ್ತ ಹಾಗೂ ಬಲಿದಾನಗೈದ ವೀರರಿಗೆ
ಕೊಡಗು ಸಂಗಾತಿಯ ಮತ್ತು ಓದುಗರ ನಮನಗಳು

**ಅಂತೂ ಇಂತೂ ವಿಜಯ ನಮ್ಮದೆ ! ವೀರರಲ್ಲಿ ವೀರರು, ಭಾರತೀಯ ಯೋಧರು**
**ಜೈ ಜವಾನ್, ಜೈ ಕಿಸಾನ್, ಭಾರತ್ ಮಾತಾಕೀ ಜೈ, ಸಾರೇ ಜಹಾಂಸೇ ಅಚ್ಛಾ ಹೈ !**



ಜನಾಂಗದ ಮೇಲೆ ಇಟ್ಟ ಅಭಿಮಾನಕ್ಕೆ ತುಂಬು ಸಂತೋಷ. ಕೊಡಗು ಸಂಗಾತಿಯು ಪತ್ರಕಾ ರಂಗದಲ್ಲಿ ಚಿರಕಾಲ ಬಾಳಿ ನೂತನ ದಾಖಲೆ ನಿರ್ಮಿಸಿ, ನಮ್ಮ ಸಮಾಜದ ಅಮೂಲಾಗ್ರ ಏಳಿಗೆಗೆ ಸಹಕಾರಿಯಾಗಿ, ಜನ ಸಹಾಯ ತಮಗಿರಲೆಂದು ಕುಲದೇವರಲ್ಲಿ ಬೇಡಿಕಂಡವೆ.

ಕೊ. ಉ. ವಿಶ್ವನಾಥ

## ಜೀವಾವಧಿ ಸದಸ್ಯತನ ಕೊಟ್ಟೊಳೊ

**ಶ್ರೀಮತಿ ಮತ್ತು ಶ್ರೀ ಕೋರನ ಉತ್ತಯ ವಿಶ್ವನಾಥ ಮತ್ತೆ ಕುಸುಮ,** ದಂಪತಿಗ ಪತ್ರಿಕೆಯ ಅಭಿವೃದ್ಧಿ ಬಯಸಿ ಜೀವಾವಧಿ ಸದಸ್ಯತನ ಕೊಟ್ಟೊಳೋ. ಇವುಕೆ ಕುಲದೇವರು ವೆಂಕಟರಮಣನ ಕೃಪಾಕಟಾಕ್ಷ ಇರಲಿತ್ತೇಳಿ ಸಂಗಾತಿ ಹಾರೈಸಿದೆ.

**– ಸಂಪಾದಕಿ**

---

## ಬಹುಮುಖ ಪ್ರತಿಭೆಯ ಚುರುಕಿನ ಹುಡುಗಿ 7ನೇ ತರಗತಿ ಪರೀಕ್ಷೆಯಲ್ಲಿ ಜಿಲ್ಲೆಗೆ ದ್ವಿತೀಯ

ಬೆಳೆಯುವ ಚಿಗುರು ಮೊಳಕೆಯಲ್ಲಿ ಎಂಬ ನಾಣ್ನುಡಿಯಂತೆ ಪಠ್ಯ ಹಾಗೂ ಪಠ್ಯೇತರ ವಿಷಯಗಳಲ್ಲಿ ಕ್ರಿಯಾಶೀಲವಾಗಿ ತನ್ನನ್ನು ತೊಡಗಿಸಿಕೊಂಡಿರುವ ಮಡಿಕೇರಿ ನಗರದ ಬ್ಲಾಸಂ ಶಾಲೆಯ ಪೂರ್ಣಿಮಾ 1998-99ರ ಸಾಲಿನ ಏಳನೇ ತರಗತಿಯಲ್ಲಿ ಕೊಡಗು ನಾಡಿಗೆ ದ್ವಿತೀಯ ಸ್ಥಾನವನ್ನು ಗಳಿಸಿ ಎಲ್ಲರ ಗಮನ ಸೆಳೆಯುವಲ್ಲಿ ವಿಜಯಿಯಾಗಿದ್ದಾಳೆ. ಇವಳು ಗರಿಷ್ಠ ಅಂಕ 600ಕ್ಕೆ 586ಅಂಕದ 97.66% ಗಳಿಸಿ ಹೆತ್ತವರಿಗೆ, ಶಿಕ್ಷಕರಿಗೆ, ಶಾಲೆಗೆ ಕೀರ್ತಿಯನ್ನು ತಂದಿದ್ದಾಳೆ.



**ಕುಮಾರಿ ಪೂರ್ಣಿಮಾ**
**D/o ಪೂಜಾರೀರ ಬೆಳ್ಳೈಪ್ಪ**

ಬಹುಮುಖ ಪ್ರತಿಭೆಯ ಈಕೆ 1998ರಲ್ಲಿ ನವೆಂಬರ್ 14ರಂದು ಮಡಿಕೇರಿ ಕಾವೇರಿ ಕಲಾಕ್ಷೇತ್ರದಲ್ಲಿ ನಡೆದ ಜಿಲ್ಲಾ ಮಟ್ಟದ ಮಕ್ಕಳ ದಿನಾಚರಣೆಯ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ನಡೆಸಿಕೊಟ್ಟ ಕೀರ್ತಿ ಇವಳದ್ದಾಗಿದೆ. ಇದು ನಿಜಕ್ಕೂ ಅರೆಭಾಷಿಕರಿಗೆ ಹೆಮ್ಮೆ ತರುವ ವಿಚಾರ. ಇವಳು ಹಾಡುಗಾರಿಕೆ, ಭಾಷಣಗಳಲ್ಲಿಯೂ ತನ್ನನ್ನ ತೊಡಗಿಸಿಕೊಂಡದ್ದಲ್ಲದೆ ರಸಪ್ರಶ್ನೆಯಂತಹ ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಅನುಭವವಿದೆ. ಈಕೆಯು ಮಡಿಕೇರಿ ಸಮೀಪದ ಅರ್ವತ್ತೊಕ್ಲು ಗ್ರಾಮದ ನಿವೃತ್ತ ಸುಬೇದಾರ್ ಮೇಜರ್ ಪೂಜಾರೀರ ಬೆಳ್ಳೈಪ್ಪ ಮತ್ತು ವೇದಾವತಿ ದಂಪತಿಗಳ ಸುಪುತ್ರಿಯಾಗಿದ್ದಾಳೆ. ಇವಳು ಇನ್ನು ಹೆಚ್ಚಿನ ಶ್ರೇಯಸ್ಸನ್ನು ಗಳಿಸಿ ಹೆತ್ತವರಿಗೂ, ನಾಡಿಗೂ, ಜನಾಂಗಕ್ಕೂ ಕೀರ್ತಿ ತರಲೆಂಬುದೆ ಸಂಗಾತಿಯ ಹಾರೈಕೆಯಾಗಿದೆ.

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
ಪಟ್ಟಡ ಪಿ. ಶೀಲಾಮಣಿ

ಗೌರವ ಸಂಪಾದಕ :
ಪಟ್ಟಡ ಎಂ. ಪ್ರಭಾಕರ

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಲಕ್ಷ್ಮಿಪುರಂ, ಮೈಸೂರು - 570 012.
**ಫೋನ್ : 0821/516771**

**ಮಡಿಕೇರಿಯಲ್ಲಿ ಸಂಗಾತಿ ಕಛೇರಿ**

ಬೈತಡ್ಕ ಜಾನಕಿ ಬೆಳ್ಯಪ್ಪ
ನಂ. 21-16 ಎಲ್. ಐ. ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಸಂಪರ್ಕಿಸುವ ವಿಳಾಸ**

ಮಣಿ ನಂಗಾರ್
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ - 571 201
ದೂರವಾಣಿ : 08272/29372

ಕುಂಭಗೌಡನ ಸೋಮಣ್ಣ
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ - 571 234

ಅಮ್ಮಾಜೀರ ಪೊನ್ನಪ್ಪ
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು - 04
ದೂರವಾಣಿ - 080/642822

ಕಲ್ಲುಮುಟ್ಲು ಬಸಪ್ಪ c/o ನಾರಾಯಣ
ನಂ. 233/9, 2ನೇ ಕ್ರಾಸ್, ನಂಜಪ್ಪ ಬ್ಲಾಕ್,
ಕೆಂಪೇಗೌಡ ನಗರ, ಬೆಂಗಳೂರು - 19
ದೂರವಾಣಿ - 080/6549669






## ಅರೆಭಾಷಿಕ ವಿಭಾಗ



## ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | - | **5 ರೂ.** |
| ಅರ್ಧ ವಾರ್ಷಿಕ | - | **60 ರೂ.** |
| ವಾರ್ಷಿಕ ಚಂದಾ | - | **120 ರೂ.** |

# ಸಂಪಾದಕೀಯ : ಅರೆಭಾಷೆಗೊಂದು ನಿಘಂಟು ಬೇಕು

ಅರೆಭಾಷೆ ಮಾತಾಡುವವರು ಹಲವಾರು ಪ್ರದೇಶಗಳಲ್ಲಿ ಹರಿದು ಹಂಚಿಹೋಗಿರುವುದರಿಂದ ಒಂದೊಂದು ಪ್ರದೇಶದ ಜನರ ಅರೆಭಾಷೆ ಶಬ್ದಗಳಲ್ಲಿ ಬದಲಾವಣೆಗಳಿವೆ. ಉದಾಹರಣೆಗೆ ಕೊಡಗಿನಲ್ಲಿಯೇ ಭಾಗಮಂಡಲದ ಆಸುಪಾಸಿನ ಗೌಡರಾಡುವ ಕೆಲವು ಶಬ್ದಗಳು ಮಡಿಕೇರಿ, ನಾಲ್ಕು ನಾಡಿನ ಗೌಡರು ಆಡುವ ಕೆಲವು ಶಬ್ದಗಳಿಗೆ ವ್ಯತ್ಯಾಸ ಇದೆ. ಅದೇ ರೀತಿ ಪೆರಾಜೆ ಸಂಪಾಜೆ ಸುತ್ತಮುತ್ತಲಿನ ಗೌಡರು ಆಡುವ ಭಾಷೆಗೂ ಸುಬ್ರಮಣ್ಯ ಕಡೆಯ ಗೌಡರಾಡುವ ಕೆಲವು ಶಬ್ದಗಳಿಗೆ ವ್ಯತ್ಯಾಸ ಇದೆ. ಉದಾಹರಣೆಗೆ ಪೆರಾಜೆ ಕಡೆಯ ಗೌಡರು ಬೊಳ್ಳು, ಉಗ್ಗಪ್ಪ, ಉಗ್ಗವ್ವವೆಂದಾದರೆ, ಮಡಿಕೇರಿ ಕಡೆಯ ಗೌಡರು ಹೊತ್ತಾರೆ, ಚಿಕ್ಕಪ್ಪ, ಚಿಕ್ಕಮ್ಮ ಎಂಬುದಾಗಿ ಹೇಳುತ್ತಾರೆ. ಈ ರೀತಿ ವ್ಯತ್ಯಾಸಕ್ಕೆ ಕಾರಣವೂ ಇದೆ. ಮಡಿಕೇರಿ, ನಾಪೋಕ್ಲು ಕಡೆಯ ಗೌಡರಿಗೆ ಕೊಡವ ಭಾಷೆಯ ಪ್ರಭಾವ ಬಿದ್ದಿದೆ. ದಕ್ಷಿಣ ಕನ್ನಡ ಜಿಲ್ಲೆಯ ಗೌಡರ ಅರೆಭಾಷೆಯಲ್ಲಿ ಹವೀಕ ಬ್ರಾಹ್ಮಣರ ಭಾಷೆ ಹಾಗೂ ತುಳುಭಾಷೆಯ ಪ್ರಭಾವವಿದೆ. ಕನ್ನಡ ಮಾತಾಡುವ ನಾಡಿನಲ್ಲಿರುವ ಗೌಡರು ಹಲವಾರು ಶಬ್ದ ಕನ್ನಡೀಕರಿಸಿದ್ದಾರೆ. ಉದಾಹರಣೆಗೆ ಗೈಪು, ಅಂಬರ, ಗಡ ವ ಶಬ್ದಗಳ ಬದಲು ಉದಕ, ಸಾರು, ಅಂತೆ ಎಂಬುದಾಗಿ ಪ ಕೊಂಡಿದ್ದಾರೆ. ಪೇಟೆ ಪಟ್ಟಣಗಳಲ್ಲಿ ಹುಟ್ಟಿ ಬೆಳೆದ ಮಕ್ಕಳಿ ಹೇಳಿದ ಕೆಲವು ಶಬ್ದಗಳ ಅರ್ಥವೇ ಗೊತ್ತಿರುವುದಿಲ್ಲ. ಆ ಎಲ್ಲಾ ಪ್ರಾಂತ್ಯದ ಗೌಡರಿಗೆ ಬೇರೆ ಬೇರೆ ಪ್ರಾಂತ್ಯದ ಜನರ ಶಬ್ದ ಹಾಗೂ ಅರ್ಥ ಗೊತ್ತಿದ್ದರೆ ಒಳ್ಳೆಯದು. ಅದ ಕನ್ನಡದಲ್ಲೂ ಹಳೇ ಮೈಸೂರಿನ ಕನ್ನಡ, ಕೊಡಗು ಹಾಗೂ ಕನ್ನಡದ ಕನ್ನಡ, ಹುಬ್ಬಳ್ಳಿ, ಧಾರವಾಡ, ಬಿಜಾಪುರದ ಶಬ್ದಗಳಿಗೆ ವ್ಯತ್ಯಾಸವಿದೆ. ಆದುದರಿಂದ ಹಳೆಯ ಭಾಷೆ ಶ ಗೌಡರಿಂದ ಮಾಯವಾಗಿ ಹೋಗುವ ಮೊದಲು ಅ ನಿಘಂಟನ್ನು ತಯಾರು ಮಾಡಿ ಸಾಮಾನ್ಯವಾಗಿಲ್ಲದ ಅರೆಭ ಶಬ್ದಗಳನ್ನು ಕಾಪಾಡಲು ಒಂದು ನಿಘಂಟು ಅವಶ್ಯವಾಗಿದೆ.

## ಹಿಂದೆನ ಹೆಂಗ್ಸ್‌ರ ದುಃಖ ಈಗೀನ ಹೆಂಗ್ಸ್‌ರ ಸುಖ

ಸ್ತ್ರೀ, ಮಾತೆ, ನಾರಿ, ಅರ್ಧಾಂಗಿ, ಕೋಮಲಾಂಗಿ, ಗೃಹಲಕ್ಷ್ಮೀ, ಅಯ್ಯೊ ಇನ್ನ್ ಏನೆಲ್ಲಾ ಹೆಸರ್ ಈ ಹೆಂಗ್ಸ್‌ರ್‌ಗೆ. ಹೆಣ್ಣ್ ಸಂಸಾರದ ಕಣ್ಣ್. ಹೌದು ಒಂದು ಕಣ್ಣ್‌ಗೆ ಹೋಲಿಸುವೆ. ಅವಳು ಮಾಡುವಂತ ಸಾಹಸಕಾರ್ಯ. ಈಗಂತೂ ಗಂಡ್‌ಸ್‌ರ ಸಮಾನತೆಲುವ ಹೆಗ್ಗಳಿಕೆ ಹೌದು. ಹಿಂದಿನ ಕಾಲಲೀ ಸ್ವಲ್ಪ ಹಿಂದುಳಿದ್ದಿದ್ದೊ. ಅದಕ್ಕೆ ಹಲವಾರು ಕಾರಣನು ಮುಖ್ಯವಾಗಿಟ್ಟು. ಆಗ ಒಂದ್ ಹೆಂಗ್ಸ್ ಹೊರಗಡೆ ಎಲ್ಲೂ ಹೋಗುವಂಗೆ ಇಲ್ಲೆ. ಗಂಡಂದಿರ್ ಹೇಳ್ದರ್‌ನ ಕೇಳಿಕಂಡ್ ಮೂಲೆ ಸೇರ್ತಿದ್ದಿದ್ದೊ. ಅವಳು ಏನಿದ್ದರೂ ಬೆಳಿಗ್ಗೆ ಹಾಸಿಗೆಂದ ಏದ್ದ್ ಒಲೆಗೆ ಬೆಂಕಿ ಮಾಡ್ದು. ಕಾಫಿ ಕಾಸುದು. ಮಕ್ಕಳ್ನ ಸುದಾರ್‌ಸುದು. ಈಗನಂಗೆ ಒಂದ್ ಎರಡ್ ಅಲ್ಲಾ ಆರರ ಮೇಲೆನೆ ಹೊತ್ತು ಹೊತ್ತಿಗೆ ಅಡಿಗೆ ಬೆಯಿಸುದು ಆಗನ ಕುಟುಂಬ ಹೆಂಗಿರ್‌ತಿತ್‌ತ ಗೊತ್ತಾಲಾ. ಹಟ್ಟಿ ಬಾಚಿ ಗದ್ದೆಗಳಿಗೆ ಹೊರ್‌ದು ಹಾಲ್ ಕರಿಯಕ್ಕಂತೂ ಆಗ ನಾಲ್ಕೈದು ಇದ್ದೆ ಇರ್‌ತ್ತಿತ್. ಇಡೀ ಸಂಸಾರದ ಬಟ್ಟೆಗಳ್ನ ಹೊತ್ತ್ ದೂರದ ಹೊಳೆಗೆ ಹೋದು. ಇದರ ಮಧ್ಯೆ ಭತ್ತ ಕುಟ್ಟುದು, ಅಕ್ಕಿ ಬೀಸುದು, ಸೌದೆತಾದು. ಅತ್ತೆಮಾವ ಯಾರಾದರ್ ಹಾಸಿಗೆ ಹಿಡ್ದಿದ್ದರೆ ಅವರಚಾಕ್ರಿ ಬೇರೆ ಗಂಡನ ಜೊತೆ ಗದ್ದೆ ತೋಟಕ್ಕೂ ಹೋಕೊಣಕ್ಕು. ಹೆಂಗಿರ್ದು ನೋಡಿ ಅವಳ ಕಷ್ಟ ಪಾಪ. ಇವುಳಿಗೆ ಮಹಿಳಾ ಸಂಘ ಸಂಸ್ಥೆಗ, ಮಹಿಳಾಒಕ್ಕೂಟ ಇದೆಲ್ಲಾ ಅವುಳಿಗೆ ನಾಲ್ಕು ಗೋಡೆಗಳ ಮಧ್ಯೆನೆ ಕಾಣ್‌ತ್ತಿತ್. ಆ ಹೊಗೆ ಹಿಡ್ಕಲ್ ರೂಮು ಒಳಗೆ ನಾಲ್ಕು ಸೌದೆ ಒಲೆಗೆ ಹಾಕಂಡ್ ಬುಸ್ ಬುಸ್ ತಾ ಉರ್ದುಗದರಲ್ಲೆ ಅವಳ ಕಾಲ ವ್ಯಥೆಯಾಗ್‌ತ್ತಿತ್. ಆಗ ಹೆಚ್ಚಿಗೆ ಎಲ್ಲಾವು ಅವಿದ್ಯಾವಂತರೆ ಆಗಿದ್ದೊ ಅವುಕೆ ಯಾವ ಸೌಕರ್ಯನೂ ಇತ್ಲೆ. ಈಗನ ಹೆಂಗ್ಸರ್‌ಗೆ ವಿಜ್ಞಾನಯುಗನೇ ತುಂಬಾ ಸಹಾಯ ಮಾಡಿಟ್ಟುತೇಳತ್. ಬೆಳಿಗ್ಗೆ ಎದ್ದ್ ಗ್ಯಾಸ್‌ಲಿ ಕಾಫಿ ಮಾಡ್ದುಂದ ಸಾಯಾಂಕಾಲದವರೆಗೆ ಎಲ್ಲಾ ಕೆಲಸಕ್ಕೂ ಯಂತ್ರಗಳನ್ನೆ ಬ ಮಿಕ್ಸಿ, ಗ್ರೈಂಡರ್, ವಾಷಿಂಗ್ ಮೆಷಿನ್, ಇನ್ನ್ ಹಲವರು ಒಂದು ಗಂಟೆಲೀ ಆಗುವ ಕೆಲ್ಸ ಈಗ ಗಳಿಗೆಲೀ ಆದೆ. ಸಮ ಬೇಕಷ್ಟ್ ಉಳ್ದದೆ. ಮತ್ತೆ ಎಲ್ಲಾಮ ವಿದ್ಯಾವಂತರ್ ಅ ಪತ್ರಿಕೆಗಳ್ನ ಓದಿ ವಿಷಯಗಳ್ನ ತಿಳ್ಕಂಡವೆ. ಮತ್ತೆ ಎಲ ಹೆಚ್ಚಿನಾಂಶ ಕಾರ್ ಜೀಪ್ ಇದ್ದದೆ. ಹತ್ತಿ ಯಾವಕಡೆ ಬೇಕಾ ಹೋಕಂಡವೆ. ಇಲ್ಲದವು ನಿಂತಲ್ಲೇ ಒಂದ್ ಪೋನ್ ಮಾ ಬಾಡಿಗೆಕಾರ್ ಬಂದದೆ. ಆತಪ್ಪಾ ಹಿಂದೆನವು ಅಂತೂ ಹಂಗಾ ಈಗನವುಕೇ ಇಷ್ಟ್ ಸೌಕರ್ಯ ಇದ್ದರೂ ಸಹ ಕಲವರ್ನ, ಇಂಥಲ್ಲಿ ಮಹಿಳಾ ಒಕ್ಕೂಟ ಉಟ್ಟ್ ಬನ್ನಿ ಪೋಯಿತೆಶ್ರೆ ನೀ ಒ ಸುಮ್ಮಿನೀರ್. ನಮ್ಮದ್ ಕೆಲ್ಸನೆ ಆತ್ಲೆ. ಇಲ್ಲಿ ಎಂಥಾ ಒ ಇದ್ದರೇನ್. ಅವು ಬಂದ್ ಮಾಡಿಕೊಟ್ಟವೆ. ತಾ ಕೇಳವೇ ಹಂಗೆಲ್ಲಾ ಹೇಳ್ ಬೇಡಿಪ್ ಇನ್ನಾದರ್ ಎಲ್ಲಾ ಗೌಡ ಮಹಿಳೆ ಒಂದಾಗಿ ಸೇರಿ ಹಲವು ಕಾರ್ಯಕ್ರಮಗಳ್ನ ಹಾಕಂಡ್ ಮಹಿಳೆ ವೀರ ಪತಾಕೆನ ಎತ್ತಿ ಹಾರ್‌ಸನೊ.

ಅಣ್ಣೇಚೀರ ಭಾರತಿ ಸೋ

ಕೊಡಗು ಸಂಗಾತಿ, ಪಾಕ್ಷಿಕ ಅನ್ನು ಕೊಂಡು ಓದಿರಿ.

# ಪರಿಚಯ : ರಾಷ್ಟ್ರದ ಭೂಸೇನೆಗೆ "ಲೆಫ್ಟಿನೆಂಟ್" ಆಗಿ ಸೇರ್ದ ನಮ್ಮ ಹೈದ ಶ್ರೀ ಯಾಲದಾಳು ಕೇಶವಾನಂದ್ ಚಂದನ್

**ದೇಶದ ಗಡಿ ಕಾರ್ಗಿಲ್‌ನಲ್ಲಿ ಯುದ್ಧ ಉಲ್ಬಣಿಸುತ್ತಿರುವಾಗ ಃ ರಕ್ಷಣಾ ಸೇವೆಗೆ ತನ್ನನ್ನ ತಾನೇ ಅರ್ಪಿಸಿಕೊಳ್ಳುತ್ತಿರುವ ಾಷಿಕರ ಹೆಮ್ಮೆಯ ಹೈದ ಲೆಫ್ಟಿನೆಂಟ್ ಯಾಲದಾಳು ಾನಂದ ಚಂದನ್**

ಪ್ರ. : ನಿನ್ನ ಪೂರ್ತಿ ಹೆಸರು ಮತ್ತೆ ಹುಟ್ಟಿದ್ದ್ ಯಾಗ?

ಉ. : ನಾನು ಯಾಲದಾಳ್ ಕೇಶವಾನಂದ್ ಚಂದನ್. ನನ್ನ ್ಯದ ತಾರೀಖ್ 25-11-1974.

ಪ್ರ. : ನಿನ್ನ ವಿದ್ಯೆ ಎಲ್ಲೆಲ್ಲಿ ಕಲ್ತದ್‌ತ ಸ್ವಲ್ಪ ಹೇಳಿಯಾ?

ಉ. : ಬಾಲಶಿಕ್ಷೆಂದ ಒಂದನೇ ಕ್ಲಾಸ್ ಇಂಗ್ಲೀಷ್ ಮಾಧ್ಯಮ, ನ; ಎರಡನೇ ಕ್ಲಾಸ್ ಸರಕಾರಿ ಸ್ಕೂಲ್, ಸಾಲಿಗ್ರಾಮ; ರರಿಂದ ನಾಲ್ಕನೇ ಕ್ಲಾಸ್, ಸೇಂಟ್ ಅನ್ನೇಸ್, ಸಿದ್ದಾಪುರ; ಂದ ಆರರವರೆಗೆ ಜ್ಞಾನಬೋಧಿನಿ, ಕೆಂಗೇರಿ, ಬೆಂಗಳೂರು; ಪುನಃ ಂದ ಹನ್ನೆರಡರತನಕ ಪ್ರಾಂಕ್ ಆಂಟೋನಿ ಸಾರ್ವಜನಿಕ ಸ್ಕೂಲ್ ಸೂರು, ಬೆಂಗಳೂರು.

ಪ್ರ. : ನೀನ್ ಇಷ್ಟೊಂದ್ ಸ್ಕೂಲ್‌ಲಿ ಓದ್‌ಕೆ ಕಾರಣ?

ಉ. : ನನ್ನ ಅಪ್ಪ ಪೋಲಿಸ್ ಕೆಲ್ಸಲಿದ್ದ್ ಆಗಾಗ ವರ್ಗ ತಿದ್ದರ್‌ಂದ.

ಪ್ರ. : ಪಿ. ಯು. ಸಿ. ವರೆಗೆ ನಿನ್ನ ಪಾಠದ ವಿಶ್ಯ ಯಾದ್?

ಉ. : ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ (ಪಿ. ಸಿ. ಎಂ.)

ಪ್ರ. : ನಿನ್ನ ಡಿಗ್ರಿ ಯಾವುದ್ ಮತ್ತೆ ಯಾವ ಫಲಿತಾಂಶಲಿ ಷ್ಟೆ ವರ್ಷಲಿ ಪಾಸಾದ?

ಉ. : ನಂದ್ ಬಿ. ಇ. ಸಿವಿಲ್ ಇಂಜಿನಿಯರಿಂಗ್ ನಾಲ್ಕು ರ್ಷ ಓದಿ 1997ರ್ಲಿ 4ನೇ ರ್‍ಯಾಂಕ್‌ಲಿ ಪಾಸಾದೆ.

ಪ್ರ. : ಆಮೇಲೆ ನಿನ್ನ ಓದುಗಾರಿಕೆ ಏನಾತ್?

ಉ. : ನಾನ್ ಎಂ. ಇ. (ಇಂಗ್ಲೀಷ್) ಓದ್‌ತಾ ಇದ್ದೆ.

ಪ್ರ. : ನೀನ್ ಮಿಲ್ಟ್ರಿಗೆ ಯಾಕೆ ಮತ್ತೆ ಹೆಂಗೆ ಸೇರ್ದತ ಸ್ವಲ್ಪ ೞಳಿಯಾ?

ಉ. : ನಾನ್ ಓದಿಕಂಡ್ ಇರ್‌ಕನ ಕೆಲವು ಪರೀಕ್ಷೆಗೆ ಕಟ್ಟ್‌ತ್ತಾ ಇದ್ದೆ. ಇದರ್‌ಂದ ನಂಗೆ ಅನುಭವ ಹೆಚ್ಚಾತ್. ಕಡೇಲಿ ಎಸ್. ಎಲ್. ಬಿ. ಪರೀಕ್ಷೆಲಿ ಕುದ್ದ್ ಪಾಸಾದೆ. ಮೂರ್‌ದಿನ ಇಂಟ್ರ್ಯೂ ನಡ್‌ತ್. ಮಾನಸಿಕ ಮತ್ತೆ ದೈಹಿಕವಾಗಿ ನಾನು ಬಾರಿ ಪ್ರಯತ್ನದ ತಯ್ಯಾರಿ ನಡ್‌ಸಿದ್ದೆ. ಕರ್ನಾಟಕದ ಬ್ಯಾಚ್‌ಲಿ ಒಟ್ಟು 105 ಅಭ್ಯರ್ಥಿಗ ಇದ್ದ್. ಅದರ್ಲಿ ಕೊಡ್‌ಗ್‌ಂದ ನಾನೊಬ್ಬನೇ ಸೆಲೆಕ್ಟ್ ಆದೆ. ಇದ್ರ್‌ಂದ ನಂಗೆ ದೇಶ ಸೇವೆ ಮಾಡೊಕ್ಕ್‌ತ್ತೇಳ್ವ ಆಸೆಗೆ ಅವಕಾಶ ಸಿಕ್ಕಿದ್ರಂದ ಬಾರಿ ಕುಸಿಯಾತ್.

ಪ್ರ. : ನಿನ್ನ ಅಪ್ಪ ಅಮ್ಮಂಗೆ ಇಷ್ಟ ಇತ್ತಾ?

ಉ. : ನನ್ನ ಅಪ್ಪ ನಂಗೆ ಆಗಾಗ್ಗ ಸಲಹೆ ಕೊಡ್‌ತಿತ್ತ್ ಮತ್ತೆ ಮಿಲ್ಟ್ರಿಗೆ ಸೇರ್‌ತ ಹೇಳಿ ಪ್ರೋತ್ಸಾಹಿಸ್‌ತಿತ್ತ್. ಆದ್ರೆ ಅಮ್ಮಂಗೆ ನನ್ನನ ಐ. ಎ. ಎಸ್. ಮಾಡ್ಸಕುತ್ತೇಳಿ ಆಸೆ ಇಟ್ಟ್‌ಕ್ಕಂಡಿತ್.

ಪ್ರ. : ನಿನ್ನ ಮಿಲ್ಟ್ರಿಗೆ ಸೇರ್‌ಕೆ ಆರ್ಡರ್ ಕೈಗೆ ಸಿಕ್ಕ್‌ಕನ ಹೆಂಗಾತ್ ಮತ್ತೆ ತರಬೇತಿ ಎಲ್ಲ ಹೆಂಗಿತ್ತ್‌ತ್ತೇಳಿ ಸ್ವಲ್ಪ ವಿವರ್ಸ್?

ಉ. : ನನ್ನ ಜೀವನದ ಪ್ರಥಮ ಹೆಜ್ಜೆ ಗ್ಯಾನ ಮಾಡಿಕಂಡ್ ಬಾರಿ ಕುಸಿಯಾತ್. ನಂಗೆ ಡೆಹರಡೂನ್‌ಲಿ 10 ತಿಂಗ ತರಬೇತಿ ನಡ್ತ್. ನನ್ನ ಜೊತೆ ಸುಮಾರ್ 513 ಮಕ್ಕ ಇದ್ದೊ. ಎಲ್ಲಾ ಭಾಷೆಯವು ಅದರ್‌ಲಿ, ಶ್ರೀಲಂಕ, ಭೂತಾನ್, ನೇಪಾಳ್, ಮಾಲ್ಡೀವ್ಸ್ ಮತ್ತೆ ಪ್ಯಾಲೆಸ್ಟೀನ್ ದೇಶದವು ಸಹ ಇದ್ದೊ. ಎಲ್ಲವೂ ಇಂಗ್ಲೀಷ್ ಮಾತಾಡೊದರ್‌ಂದ ಭಾಷೆಗೆ ಕಷ್ಟ ಆತ್‌ಲೆ. ಸುರ್ ಸುರ್‌ಲಿ ವ್ಯಾಯಾಮ ಬಹಳ ಕಷ್ಟ ಆಗ್‌ತಿತ್ತ್ ಮತ್ತೆ ಒಗ್ಗಿತ್. ಇಲ್ಲಿನಂಗೆ ಕಷ್ಟ ಆದ್‌ತ್ತೇಳ್‌ರೆ, ಬೆನ್‌ಡಿಟ್ಸ್ ಟ್ರೈನಿಂಗ್ ಇದ್ ಯುದ್ಧ ಮಾಡ್ದಂಗೆ ವಾತಾವರಣ ಸೃಷ್ಟಿ ಮಾಡಿ ಬಾರ್ಡರ್‌ಲಿ ರಾತ್ರಿ ಅತಿಕ್ರಮಣ ಮಾಡಿಕಂಡ್ ಮ್ಯಾಪ್‌ರೀಡಿಂಗ್, ಒಟ್ಟಿಗೆ 40ಕಿ. ಮೀ. ನಡೆಯದು. ಇದ್ರೊಟ್ಟಿಗೆ ನಮಿಗೆ ಸಾಹಸ ಕ್ರೀಡೆಗಳಲ್ಲಿ ಮುಖ್ಯವಾಗಿ ಸೈಕ್ಲಿಂಗ್, ಬೈಕ್ ಹೈಕಿಂಗ್, ಪ್ಯಾರಾಸೆಯಿಲಿಂಗ್, ವಾಟರ್ ಸ್ಪೋರ್ಟ್ಸ್ ಕಲ್ಸಿತ್ತಿದ್ದೊ. ತಿಂಗಳಿಗೊಂದು ಪರೀಕ್ಷೆ ನಡೆತಿತ್. ಇದೆಲ್ಲಾ ಕಷ್ಟ ನೋಡಿ ಒಂಡೆರಡ್ ಮಕ್ಕ ಬಿಟ್ಟ್ ಹೋದೊ. ಈ ಸಂದರ್ಭಲಿ ನಂಗೆ 2ನೇ ಲೆಫ್ಟಿನೆಂಟ್ ಜಂಟಲ್‌ಮೆನ್ ಕ್ಯಾಂಡೆಟ್, ಹುದ್ದೆ ಕೊಟ್ಟಿದ್ದೊ. ಟ್ರೈನಿಂಗ್ ಆದಂಗೆ, ಸರಾಸರಿ ಅರ್ಹತೆಲಿ ಐ. ಸಿ. ನಂಬರ್, ಪಾಸಿಂಗ್ ಔಟ್ ಪೆರೇಡ್‌ಲಿ ತಾರೀಖ್ 12-6-99 ರಂದ್ 'ರಾಷ್ಟ್ರಾಧ್ಯಕ್ಷರ' ಕೈಲಿ "ಪ್ರೆಸಿಡೆಂಟ್ಸ್ ಕಮೀಶನ್" ಲೆಫ್ಟಿನೆಂಟ್ ಹುದ್ದೆ ನೀಡ್ದೊ. ನನ್ನ ಎಂ. ಇ. ಜಿ. ವಿಭಾಗದ 14ನೇ ರಿಜಿಮೆಂಟ್‌ಗೆ ಪೋಸ್ಟಿಂಗ್ ಮಾಡಿ, ಈಗ ರಜೋರಿ ಜಮ್ಮುಲಿ ಒಳೆ. ನಾನು ಇಂಜಿನೀಯರಿಂಗ ಆದ್ರ್‌ಂದ ನಂಗೆ 1997ರ್‌ಂದ ಹೆಚ್ಚಿನ ಅರ್ಹತೆಗಾಗಿ ಸೇವಾಹಿರಿತನ ಸಿಕ್ತ್. ಇಲ್ಲಿ ಎನ್. ಡಿ. ಎ. ಮೂಲಕ ಬಂದವ್ 4 ವರ್ಷ ಕಲ್ತದ್ರ, ನಾವು ಒಂದೇ ವರ್ಷಲಿ ಕಲಿಯಕ್ಕಾಗಿತ್ತ್! ಈ ತರಬೇತಿಲಿ ಊಟದ ವ್ಯವಸ್ಥೆ ಬಾಳ ಲಾಯಿಕ್ಕಿತ್ತ್.

ಪ್ರ. : ಜನರಲ್ ಕಾರ್ಯಪ್ಪ ಮತ್ತೆ ಜನರಲ್ ತಿಮ್ಮಯ್ಯ, ಇವರ ಬಗ್ಗೆ ನಿನ್ನ ಅನಿಸಿಕೆ ಏನು?

ಉ. : ಮಿಲ್ಟ್ರಿಲಿ 2 ರಿಜಿಮೆಂಟ್‌ಗೆ ಇವರ ಹೆಸ್ರ್ ಉಟ್ಟು. ಇವರ್‌ಂದ ಕೊಡ್‌ಗ್‌ಗೆ ಮತ್ತೆ ಕೊಡ್‌ಗ್‌ಂದ ಬಂದ ಮಕ್ಕಳಿಗೆ ಬಾರಿ ಮರ್ಯಾದಿ. ಈ ವೀರ ಸೇನಾನಿಗಳ ಆದರ್ಶ ಶಿಸ್ತ್‌ಗಳನ್ನ ಅಳವಡಿಸಿ ಕಂಡರೆ ನಾವು ಸಾ ಉನ್ನತ ಮಟ್ಟಕ್ಕೆ ಹೋಕ್‌ತ್ತೇಳವ ನಂಬಿಕೆ ಉಟ್ಟು.

ಪ್ರ. : ಈಗ ಮಿಲ್ಟ್ರಿಗೆ ಸೇರಿ ಆತ್ ಏನಾಕುತ ಒಳ?

ಉ. : ಈಗಿನ ಮಟ್ಟದ ಅವಕಾಶಗಳನ ಗ್ಯಾನ ಮಡ್‌ರೆ, ಮೇಜರ್ ಜನರಲ್‌ವರೆಗೆ ಸೇವೆಗೆ ಸಿಕ್ಕುದುತ ಆದೆ. ಅವಕಾಶ ಕಮ್ಮಿ ಇರ್ದ್‌ಂದ್ರ ಇದ್‌ಕ್ಕಿಂತ ಮೇಲೆಗೆ ನನ್ನ ಅದೃಷ್ಟ ಮತ್ತೆ ಪ್ರಯತ್ನ ಮೇಲೆ ಉಟ್ಟು.

ಪ್ರ. : ಬ್ಯಾರೆ ಸಮ್ಯಲಿ ನೀನು ಎನ್ ಮಾಡಿಯಾ?

ಉ. : ನಾನ್ ಹೆಚ್ಚಾಗಿ ಟಿ. ವಿ. ನೋಡ್ನೆ. ಜೀವನಲಿ ಎಲ್ಲಾ ವಿಶ್ಯಗಳ ಬಗ್ಗೆ ಆಸಕ್ತಿ ಉಟ್ಟು.

ಪ್ರ. : ಯಾವ್ಯಾವ ಆಟ ಇಷ್ಟ ನಿಂಗೆ?

ಉ. : ನಾನ್ ಸ್ವತಃ ಶಟಲ್ ಬ್ಯಾಟ್‌ಮಿಂಟನ್ ಆಟಗಾರ. ಪುಟ್‌ಬಾಲ್, ಟೆನಿಸ್ ಇಷ್ಟ. ಇಜಿಕ್ಕೆ ಹೋದ ಮೇಲೆ ಕಲ್ತದ್‌ತ್ತೇಳಿ ನಗೆ.......!

ಪ್ರ. : ಈಗ ದೇಶದ ಕಾರ್ಗಿಲ್ ಗಡಿಲಿ ಹೆಚ್ಚ್ ಕಮ್ಮಿ ಯುದ್ಧ ನಡೇತಾ ಉಟ್ಟು. ಈಗ್ಲೆ ನಿನ್ನ ಅಲ್ಲಿಗೆ ಕಳ್ಸಿರೇ.....?

ಉ. : ಛೇ. ನಾನ್ ಸೇರ್‌ದ್ ದೇಶಸೇವೆಗೆ. ಒಂದ್ ಒಳ್ಳೆ ಅವಕಾಶ ಸಿಕ್ಕಿತ್‌ತ್ತೇಳಿ ಬಾರಿ ಕುಸೀಲಿ ಹೋನೆ. ದೇಶದ ರಕ್ಷಣೆಗಾಗಿ ಹೋರಾಟ ಮಾಡ್‌ಕೆ ಹೆಮ್ಮೆ ಆದೆ. ಹೋರಾಡಿ ಗೆದ್ದ್ ಬಂದವೆತ್ತೇಳ್ಟ ವಿಶ್ವಾಸ ಉಟ್ಟು. ನಾನ್ ಬಾರ್ಡರ್ಲಿ ಇರ್ದ್‌ಂದ್ರ ಇದ್‌ಕ್ಕಿಂತ ಬ್ಯಾರೆ ಅನುಭವ ಯಾಕೆ?

ಪ್ರ. : ಇಷ್ಟೆಲ್ಲಾ ಆಗಿ ನೀನ್ ಅರೆಭಾಷೆ ಮರ್ತತೇಲಲಾ?

ಉ. : ನಾನ್ ಅರೆಭಾಷೆ ಕಲ್ತೊಳೆ. ನಂಗೆ ಮಾತಾಡ್ಕೆ ಜೊತೆಲಿ ಜನ ಇಲ್ಲದರ್‌ಂದ ಸ್ವಲ್ಪ ಮರ್ತ್‌ಂಗೆ ಆಗುಟು.

ಪ್ರ. : ಕೊಡಗು ಸಂಗಾತಿ ಬಗ್ಗೆ ನಿನ್ನ ಅಭಿಪ್ರಾಯ ಏನ್?

ಉ. : ನಮ್ಮ ಜನಾಂಗದ, ಭಾಷೆ ಮತ್ತೆ ಸಂಸ್ಕೃತಿನ ಉಳ್ಸ್‌ವ ನಿಟ್ಟ್‌ಲಿ ಈ ಸಂಗಾತಿ ಹುಟ್ಟಿಕ್ಕಂಡ್‌ದ್ ನಿಜಕ್ಕೂ ಮೆಚ್ಚಕೂ. ನಮ್ಮ ಅಭಿವೃದ್ಧಿಗೆ ಇದೊಂದು ದಾರಿದೀಪ. ಗೌಡ ಜನಾಂಗವನ್ನೇ ಗುರುತಿಸಿಕಣ್‌ವಂತ ಮಹಾತ್ಕಾರ್ಯ ಮಡ್‌ತ್ತಿರ್‌ದ್ರಂದ ಎಲ್ಲವು ಸಹಕರಿಸಕೂ. ನಾನ್ ಮಿಲ್ಟ್ರಿಲಿ ಇದ್ದರೂ ಮರ್‌ತ್‌ದನ ಪುನಃ ಈ ಸಂಗಾತಿಲಿ ಕಲ್‌ತ್‌ಕಣತ್. ನಂಗಂತೂ ಇದನ ಓದಿಕೆ ಬಾಳಇಷ್ಟ ಮತ್ತೆ ಬಾರಿ ಅಭಿಮಾನ.

ಪ್ರ. : ನಿನ್ನ ಅಪ್ಪ ಪೋಲಿಸ್ ಇಲಾಖೆಲಿ ಇದ್ರ್‌ಂದ ನಿನ್ನ ಸೆಲೆಕ್ಷನ್‌ಗೆ ಪ್ರಭಾವ ಇತ್ತಾ?

ಉ. : ನನ್ನ ಅಪ್ಪನ ಹುದ್ದೆದ್ ಯಾವ ಪ್ರಭಾವ ಇಲ್ಲೆ. ಅವರ ಪ್ರೇರಣೆ, ಮಾರ್ಗದರ್ಶನ, ಪ್ರೋತ್ಸಾಹ ನಂಗೆ ಸಾಕಷ್ಟ್ ಇತ್ತ್ !

ಪ್ರ. : ನಿನ್ನ ತಮ್ಮ ಚೇತನ್ ಎನ್. ಡಿ. ಎ. ಗೆ ಸೆಲೆಕ್ಷನ್‌ಗೆ ಹೋಗಿತ್ತಾ? ಇದ್ರಂದ ನಿಂಗೆ...?

ಉ. : ಹೌದು ಅಂವ ಹೋಗಿ ಅಲ್ಲಿ ಕೆಲವು ತಪ್ಪುಗಳ್‌ಂದ ಪಾಸಾತ್‌ಲೆ. ಅದನ ನಂಗೆ ಹೇಳ್ದರ್‌ಂದ ಬಾರಿ ಪ್ರಯೋಜನ ಆತ್.

**ಅಮ್ಮಂಗೆ ಪ್ರ.** : ನಿಮ್ಮ ಮಂಜ್ನ ಮಿಲ್ಟ್ರಿಗೆ ಸೇ ಉಟ್ಟಾ?

ಉ. : ಇಲ್ಲೆ ನಂಗೆ ಅಂವ ಐ. ಎ. ಎಸ್. ಮಾಡ್ಲಿತ್ ಇತ್ತ್.

ಪ್ರ. : ಈಗ ಏನ್ ಹೇಳ್‌ರೆ?

ಉ. : ಏನ್ ಮಾಡ್‌ದು ನಾವು ಗ್ಯಾನ ಮಾಡೆ ಆದೊಂದು ! ಈಗ ಅವನ ಅನುಭವ ಕೇಳ್ದ ಮೇಲೆ ಹೆಮ್ಮೆ ಆದ್ರೂ ಎರಡ್ನೆ ಮಂಜನ ಐ. ಎ. ಎಸ್. ಮಾಡ್ಸಕುತ್ತೇ ಉಟ್ಟು. ಇನ್ನೇನ್ ಆದೊ !

**ಅಪ್ಪಗೊಂದು ಪ್ರ.** : ನಿಮ್ಮ ಮಂಜನ ಮಿಲ್ಟ್ರಿಗೆ ಸೇರ್ಸಿ ಇಷ್ಟ ಪಟ್ರೆ?

ಉ. : ನಾನ್ ಪೋಲಿಸ್ ಇಲಾಖೆಲಿ ಇದ್ರೂ, ನನಗಿಂತ ಮಟ್ಟದ ಶಿಸ್ತ್ ಮತ್ತೆ ಉನ್ನತ ಅಧಿಕಾರಿಯಾಗಿ ವ್ಯಕ್ತಿಯಾಕುತ್ತಲ್ಲದೆ, ನನ್ನ ಸೇವೆ ಬರೀ ರಾಜ್ಯಕ್ಕೇ ಆದ್‌ರ್‌ಂದ, ನನ್ನ ಮಂಜ ದೇಶ ಸೇವೆಗೆ ಅರ್ಹನಾಕುತ್ತೇಳ್ಟ ಮೂಡಿದ್ದ್. ಅದು ಈಗ ಈಡೇರ್‌ತ್ !

ಪ್ರ. :ನಿಮ್ಮ ಮಂಜನ ಸೆಲೆಕ್ಷನ್‌ಗೆ ನಿಮ್ಮ ಪಾತ್ರ ಪ

ಉ. : ನಾನ್ ಸುರ್‌ಂದಲೇ ಅವನ ಅರ್ಥ ಮಾಡಿ ಕೆಲವು ಪರೀಕ್ಷೆಗಳಿಗೆ ಕೂರ್ಸಿ, ಪ್ರಚಲಿತ ವಿದ್ಯಾಮಾನಗಳ ಮಾಹಿತಿಗಳ್‌ನ ಕೊಟ್ಟ್ ಅವನ ಜ್ಞಾನ ಹೆಚ್ಚೊ ಆಸಕ್ತಿ ಮು ಉದಾ. : ಪಿ .ಯು. ಸಿ. ವರೆಗೆ ಅವನ ಮೊಗ್ಗಿ ಬಾ ಹೇಳ್ಸ್‌ತ್ತಿದ್ದೆ.

ಪ್ರ. : ನಿಮ್ಮ ಮಂಜನ ಪಾಸಿಂಗ್ ಔಟ್ ಪೇ ನೀವಿಬ್ಬರೂ ಒಟ್ಟಿಗೆ ಇದ್ದರೀತ ನಿಮ್ಮ ಪೊಟೋ ಹೇಳ್ದೆ. ಅನಿಸಿಕೆ ಏನು?

ಉ. : ನಮ್ಮ ಮಂಜನ ಪಿಪಿಂಗ್ ಸರ್‌ಮನಿಲಿ ನಾವಿ ಅತ್ಯಂತ ಸುದಿನ. ಇದ್ ನಮ್ಮ ಭಾಗ್ಯ. ನಾವಿಬ್ಬರೂ ಅವನ ಹೆ 'ಸ್ಟಾರ್' ಸಿಕ್ಕ್‌ಸ್‌ಕನ ನಮ್ಮ ಕ್‌ಣ್ಣ್‌ಲಿ ಕುಸೀಲಿ ನೀರ್ ಬ ಇದ್‌ನ ನಮ್ಮಿಬ್ರ್‌ಗೆ ಮರೆಯಕ್ಕಾದುಲೇ !

**ಕೊನೆಯ ಪ್ರ.** : ಇಂದ್‌ನ ಗೌಡ ಹೈದಂಗ ಗೊಡೆಗಳಿ ಕೆಮಿ ಮಾತ್ ಏನ್?

ಉ. : ನನ್ನಂಗೆ ಬ್ಯಾರೆವೂ ಸ ಮ್ಯಾಲೆ ಬರೊಕು. ಅವ್ರುಸ ಒ ಗುರಿ ಇಟ್ಟ್‌ಕಂಡ್ ಸತತ ಪ್ರಯತ್ನಂದ ತಮ್ಮನ್ನ ಅ ತೊಡ್‌ಗಿಸಿಕಣಕು. ಸ್ವಪ್ರಯತ್ನಂದ ಆಸಕ್ತಿಯೊಟ್ಟಿಗೆ, ಹಿರಿ ಸಲಹೆ, ಮಾರ್ಗದರ್ಶನ ಸ್ಫೂರ್ತಿ ಪಡ್‌ಕಂಡ್ರೆ ಖಂಡಿತಾ ತ ಬವುಸ್‌ತ್‌ನ ರೂಪಿಸಿಕಣ್‌ವಲ್ಲಿ ಸಂಸಯ ಇಲ್ಲೆ! ಮನ್ಸ್ ಇ ಮಾರ್ಗ.

ಧನ್ಯವಾದಗ ನಿಮ್ಮ ಮಂಜನ ಬವುಸತ್ ಇನ್ನೂ ಲಾಯಾಕ್ಕಾ

ಕೊಡ್‌ಗ್‌ನ, ಗಾಳಿಬೀಡ್‌ನ, ಮೊಣ್ಣಂಗೇರಿ ಗ್ರಾ ಶ್ರೀಯುತ ಯಾಲದಾಳ್ ಕೇಶವಾನಂದ್ ವಿಶಾಲಾಕ್ಷಿ, ದಂಪತಿ ಹಿರಿ ಮಂಜ ಈ ಚಂದನ್. ಇಂವ ದಿವಂಗತ ದಂಬೆಕೋಡಿ ಸುಬ್ರಾ ಮತ್ತೆ ದಿವಂಗತ ಯಾಲದಾಳು ದೇವಯ್ಯನವರ ಮೊಮ್ಮಗ.

ನಂಬೆಕೋಡಿ ಎಸ್. ಮಾದಪ್ಪ ಇವನ
ನರಮಾವ ಹೌದು. ಮಕ್ಕಳ ಬಹುಸತ್‌ನ
ಪಿಸಕ್ಕುತ್ತಾದರೆ ಯಾಲ್ವಾಳ್ ದಂಪತಿಗಳ
ುತ್ನ ಸಮಯೋಚಿತ ಸಲಹೆ ಮತ್ತೆ
ರ್ಗದರ್ಶನಂದ, ಚಂದನ್ ಮನ್ಸ್‌ಗೆ
ಡ್ ಮೇಲೆ ಬಂದ್, ಉನ್ನತ ಹುದ್ದೆನ
ುಕರಿಸಿ, ತನ್ನ ದೇಹನ ದೇಶಸೇವೆಗೆ
ುಪಾಗಿರಿಸಿದ್ ಎಲ್ಲವು ಮೆಚ್ಚಕೂ.
ನ ಸ್ಫೂರ್ತಿ, ದೇಶಾಭಿಮಾನ, ದೇಶ
ು, ಎಷ್ಟುಟ್ಟುತ್ತಾ ಅವನ ಮಾತ್‌ಲೇ
ತ್ತಾದೆ. ಇದ್ ಬ್ಯಾರೆಯವುಕೂ ಬರಲಿ.
ಕೊಡಗ್‌ನ ಗೌಡ ಜನಾಂಗದ ಸುಪುತ್ರ,
ಕ್ಕೆ ಕೀರ್ತಿ ತಂದ್, ಹೆತ್ತವುಕೆ ಕುಸಿತಂದ್,
ಂಗದ ಕಣ್ಮಣಿಯಾಗಲಿತ್ತೇಳಿ ಕೊಡಗು
ುತಿ ಯೊಟ್ಟಿಗೆ ನಾವೆಲ್ಲವೂ ಹಾರೈಸೊಮೊ.

ಈ ಸಂದರ್ಭಲಿ ಶ್ರೀ ಚಂದನ್
ಡಗು ಸಂಗಾತಿಗೆ ಚಂದಾದಾರರಾಗಿ
ಕರಿಸಿದಕ್ಕೆ ವಂದನೆಗ.

**ಬರಹ : ಗುಡ್ಡೆಮನೆ ರಮೇಶ್**
**ಸಂದರ್ಶನ : ಬೈತಡ್ಕ ಬೆಳ್ಯಪ್ಪ**
ಮಡಿಕೇರಿ.

## ಕೊಡಗಿನ ಮಹಿಮೆ

ಕನ್ನಡ ನಾಡಿನ ಕವಿಗಳು ನಾವು
ಕರುಣಾಮಾತೆ ಕಾವೇರಮ್ಮನ ಮಕ್ಕಳು
ಕೊಡಗಿನ ಮಣ್ಣಿನ ಕಲಿಗಳು ನಾವು
ಕಾವೇರಿ ಮಾತೆಗೆ ಜಯವು ಜಯವು.
ರ್ಯ ಸಾಹಸವೆ ನಮ್ಮಯ ಮಂತ್ರ
ತಿ ಕರುಣೆಯೆ ನಮ್ಮಯ ಇಂಚರ
ಲ್ಲಿಯ ಜನರ ಮನಸು ಉದಾರ
ಡಗನು ನೋಡಲು ನೀ ಒಮ್ಮೆ ಬಾರ.
ಈ ನೆಲಕಿಹುದು ನೂರಾರು ವರ್ಷದ ಚರಿತೆ
ಅದೇನೆಂಬುದ ನಾ ಈಗ ಅರಿತೆ
ಇದು ಶೂರರ ನಾಡು ಎಂಬುದ ನೀ ಮರೆತೆ
ಇದೇ ನಿನ್ನಲಿರುವ ದೊಡ್ಡ ಕೊರತೆ.
ಹಾ ಪವಾಡ ಪುರುಷರು ಹುಟ್ಟಿಹರಿಲ್ಲಿ
ರತಾಂಬೆಗೆ ಅಚಲವಾದ ಸೇವೆ ಸಲಿಸುತಲಿ
ಡಗಿನ ಕೀರ್ತಿ ಎಲ್ಲೆಲ್ಲು ಚೆಲ್ಲುತಲಿ
ಳೇಳು ಜನ್ಮದ ಪುಣ್ಯ ನೀ ಹುಟ್ಟಿಹೇ ಈ ನೆಲದಲ್ಲಿ.

**ಶ್ರೀಪಾದ ರಾಜ್ ಹೆಚ್. ಕೆ.**
ರಾಮಾನುಜ ರಸ್ತೆ, ಮೈಸೂರು.

## ರಾಷ್ಟ್ರದ ರಕ್ಷಣೆಗಾಗಿ ತನ್ನ ಆತ್ಮಾರ್ಪಿಸಿದ ಕೊಡಗಿನ ಸಿಂಗೂರ್ ಕುಟ್ಟಪ್ಪ ಮೇದಪ್ಪನವರಿಗೆ ಶ್ರದ್ಧಾಂಜಲಿ

ಭರತಖಂಡವೇ ಒಂದು ಸುಂದರ ಲೋಕ
ಭಾರತಮಾತೆಯ ಅಂದಕ್ಕೆ ನಾಚುವುದು ತ್ರಿಲೋಕ
ಅವಳ ಮಕ್ಕಳೆಲ್ಲರೂ ಸೇರಿ ಮಾಡಿಹರು ಒಂದು ಭೂಲೋಕ
ಅನ್ಯರೆಲ್ಲರೂ ತನ್ನವರೇ ಎನ್ನುವ ಅವರಲೊಬ್ಬ ಬಹುಭಾಷೀ ಕರ್ನಾಟಕ
ಅವನ ವೀರ ಪುತ್ರರಲೊಬ್ಬನು ಸುಂದರ ಬೆಡಗಿನ ಕೊಡಗು
ಆ ಕೆಚ್ಚೆದೆಯ ಗಂಡುಗಲಿ ತೋರಿಹನು ಇತರರಿಗೆ ಬೆರಗು
ಭರತಖಂಡದ ರಕ್ಷಣೆಯೇ ತನ್ನ ಗುರಿ ಎಂದಿಹನು ಈ ವೀರ ಕೊಡಗು
ಇಂದಿಗೂ ನೀಡುತ್ತಿರುವನು ವೀರಮರಣವ ಈ ಚಿರಂಜೀವಿ ಗಂಡು
ಓ ಕಾವೇರಿ ಮಾತೆಯೇ ಸಿಂಗೂರ್ ಕೆ. ಮೇದಪ್ಪನವರನ್ನೂ ಪಡೆದ
ನಿನಗೆಸ್ಟು ಹೆಮ್ಮೆ !! ಶ್ರದ್ಧಾಂಜಲಿ

**ದೇವಂಗೋಡಿ ಕೆ. ಗಿರೀಶ್, ಮೈಸೂರು**
**(ಭಾಗಮಂಡಲನಾಡಿನ ಜನತೆಯ ಪರವಾಗಿ)**

## ಶಾಲೆ ಹೂಗಳು

ನಾವು ಶಾಲೆ ಹೂಗಳು ಒಂದೆ ತಾಯಿ ಮಕ್ಕಳು
ತೆರಳುವಾ ಸಾಲಾಗಿ ಹರುಷದಿಂದ ಶಾಲೆಗೆ।
ಕಿರಿಯರೊಡನೆ ಪ್ರೀತಿಯಿಂದ ಓದು ಬರಹ ಕಲಿಯುವ
ಗುರುಗಳಿಂದ ವಿದ್ಯೆಯನ್ನು ಸರಸದಿಂದ ಕಲಿಯುವ ॥
ನಾವು ನಿಮಗೆ ನಮಿಪೆವು ಇದುವೆ ಸಂಪ್ರದಾಯವು
ನೀವು ಕಲಿಪ ಗುರುಗಳು ನಾವು ನಿಮ್ಮ ಮಕ್ಕಳು।
ಸರಸರತಿಯಳ ದಯದಲ್ಲಿ ಗುರುಹಿರಿಯರ ಪ್ರೇಮದಲ್ಲಿ ಕಲಿಯುವ
ಸ್ವಾತಂತ್ರ್ಯದ ನೆರಳಿನಲ್ಲಿ ಖ್ಯಾತಿಯ ಪಡೆದ ಹುತಾತ್ಮರ ಸ್ಮರಿಸುವ ॥
ಭಾರತ ಮಾತಾಕೀ ಜೈ ! ಎಂಬ ಘೋಷಣೆಯ ಕೂಗುವ
ಸಂಭ್ರಮದಿ ಕುಣಿದಾಡುವ ಹುತಾತ್ಮರ।
ಬೆಂಬಿಡದೆ ಕಾದಿ ಜೀವವಿತ್ತ ವೀರರ
ಇಂದು ನಾವು ಬಂದು ಸೇರಿ ನೊಂದವರಿಗೊಂದು ಬಾರಿ ॥
ವಂದಿಸುತ್ತ ನಂದಾ ದೀಪವನ್ನು ಹಚ್ಚುವ
ಚಂದದಿಂದ ಜಯವೆಂದು ನಿಂದು ಕೂಗುವ।
ಬನ್ನಿ ದೇಶ ಭಕ್ತರೆಲ್ಲ ಇನ್ನು ಸಾಕು ಭೇದವೆಲ್ಲಿ
ಬನ್ನಿ ಅಂಬರದಿ ಜೊತೆಗೂಡಿ ಉನ್ನತ ಮನದಿ ದೇಶಸೇವೆ ಗೈಯುವ ॥
ತನ್ನ ತನವನ್ನು ತಾವೇ ಕಂಡು ಹಿಗ್ಗುವ !
ಭಾರತಾಂಬೆ ಪುತ್ರರೆಲ್ಲ ಸಾರಿ ಶಾಂತಿ ಜಗಕ್ಕೆಲ್ಲ
ಧೀರತನದಿ ಅಹಿಂಸೆಯನ್ನು ತೋರುವ
ಸಾರಪಂಚಶೀಲ ತತ್ವವನ್ನು ಬೀರುವ ॥
ಒಂದೇ ಜನಾಂಗವೆನ್ನುವ ಉನ್ನತ ಮನದಿಂದಿರುವ
ನಾವು ಶಾಲೆ ಹೂಗಳು ಒಂದೆ ತಾಯಿ ಮಕ್ಕಳು ॥

**ಸಬ್ಬಂಡ್ರ ಆರ್. ಶರತ್ ಕುಮಾರ್.**
**ಮಕ್ಕಂದೂರು ಕೊಡಗು**

# ಸರ್ಪ ಗಂಧ

✦ ಕೌಂಡಿನ್ಯ

ಧಾರವಾಹಿ -9

ರೇವತಿಗೆ ತೇಲುತ್ತಿರುವ ಅನುಭವ !

ಅವಳ ದುಂಡನೆಯ ತೋಳನ್ನು ಬಲಿಷ್ಠ ಹಸ್ತವೊಂದು ಹಿಡಿದು ತನ್ನ ಹತ್ತಿರ ಎಳೆದು ಕೊಂಡಿತು.

ರೇವತಿ ಎದೆಗೆ ಗುದ್ದಿದಳು !

ಹಾವು ಭುಸ್ ! ಎಂದು ಪೂತ್ಕರಿಸುತ್ತಾ ಮತ್ತೊಂದು ಸಲ ಹೆಡೆಯನ್ನು ಅಪ್ಪಳಿಸಿತು !

ಆದರೆ ರೇವತಿಯನ್ನು ಎತ್ತಿ ಭುಜದ ಮೇಲೆ ಹಾಕಿಕೊಂಡು ತುಂಬಾ ದೂರ ಓಡಿತ್ತು ವ್ಯಕ್ತಿ !

ರೇವತಿಗೆ ಬವಳಿ ಬಂದಂತೆ ಆಗಿತ್ತು ! ದೇಹ ನಡುಗುತ್ತಿದೆ.

ಆ ವ್ಯಕ್ತಿ ಈಗ ಅವಳನ್ನು ತನ್ನ ಭುಜದಿಂದ ಇಳಿಸಿ ಕರುಣೆ, ಪ್ರೀತಿಯಿಂದ ನೋಡಿತು.

ಆ ವ್ಯಕ್ತಿ ಪ್ರಸನ್ನ !

ರೇವತಿಯ ಮುಖದ ತುಂಬಾ ಬೆವರಿನ ಹನಿಗಳು ಮೂಡಿದೆ. ಕಣ್ಣುಗಳಲ್ಲಿ ಭಯ..... ಭಯ !

ಪ್ರಸನ್ನ ನಗುತ್ತಾ "ರೇವತಿ..... ಹಾವು ಹೊರಟು ಹೋಗಿ ತುಂಬಾ ಹೊತ್ತಾಯಿತು" ಎಂದನು.

ರೇವತಿ ಭಯದಿಂದ ಹುತ್ತಗಳ ಕಡೆ ನೋಡಿದಳು. ಪ್ರಸನ್ನ "ಅಲ್ರಿ.... ನೀವ್ಯಾಕೆ ಒಬ್ಬರೇ ಇಂತಹ ಸ್ಥಳಕ್ಕೆ ಬರಲು ಹೋದ್ರಿ?"

ರೇವತಿ ಉತ್ತರಿಸಲಿಲ್ಲ.

ನೀವು ನೋಡಿದ್ದು ಒಂದೇ ಒಂದು ಹಾವು. ಈ ಹುತ್ತದಲ್ಲಿ ಕಡಿಮೆ ಅಂದರೂ ನೂರು ಹಾವುಗಳಿವೆ.

ರೇವತಿ ನಡುಗಿದಳು.

ಪ್ರಸನ್ನ "ಇಲ್ಯಾಕೆ ಮಾತು ಭಯ ಪಡಬೇಡ ಹುತ್ತದ ಅನುಭವ ಆಯ್ತಲ್ಲ. ಇನ್ನು ಹೊರಡೋಣವೆ?"

ರೇವತಿ ಹೆದರುತ್ತಲೇ ತಲೆಯಾಡಿಸಿದಳು.

ಇಬ್ಬರು ಈಗ ಹೊಳೆಯ ಹತ್ತಿರ ಬಂದರು.

ಬೃಹದಾಕಾರದ ಬಂಡೆಗಳಿಂದ ಆವೃತ್ತ ವಾಗಿರುವ ತೀರ. ಗಗನ ಚುಂಬನ ವೃಕ್ಷಗಳು ಬೆಳೆದುಕೊಂಡಿವೆ.

ನದಿಯ ಭೋರ್ಗರತೆ ಕೇಳುತ್ತಿದೆ !

ಅವರಿಬ್ಬರು ಬಂಡೆಯೊಂದರ ಮೇಲೆ ಕುಳಿತು ನೀರಿನಲ್ಲಿ ಕಾಲುಗಳನ್ನು ಇಳಿ ಬಿಟ್ಟಿದ್ದಾರೆ. ಬಿಸಿಲಿನ ಪ್ರಖರತೆ ಇದೆ !

ರೇವತಿ "ಅದೇ ಕಾರಣವೋ ಅ ಬೇರೆ ಏನಾದರೂ ಇರವುದೋ ಎ ಗಂಭೀರವಾಗಿ ಕೇಳಿದಳು"

ಪ್ರಸನ್ನ ಕೋಪದಿಂದ "ನಿಮಗ್ಯಾಕೆ ಬಗ್ಗೆ ಅನುಮಾನ ಬಂದಿದೆ.

ಅನುಮಾನವೇನು ಇಲ್ಲ. ಕ್ಯಾಜು ಆಗಿ ಕೇಳಿದೆ ಅಷ್ಟೇಎಂದಳು.

ಉತ್ತರಿಸಲಿಲ್ಲ ಪ್ರಸನ್ನ !

ಅವನ ಮುಖದ ಸ್ನಾಯುಗಳು ಬಿ ಕೊಂಡಿದೆ. ಹುಬ್ಬುಗಳು ಸೇರಿಕೊಂಡಿದೆ. ಕೋಪದ ಸಂಕೇತ.

ರೇವತಿ ಮೆಲ್ಲನೆ "ನಿಗೂಢ ರೀತಿ ಸತ್ತಿರುವ ನನ್ನ ಗೆಳತಿ ಒಬ್ಬನನ್ನು ತು

> **ಇಲ್ಲಿಯವರೆಗೆ.........**
>
> ರೇವತಿ ಆ ರಾತ್ರಿ ಗೆಳತಿ ಮೀನಳ ಕೊಠಡಿಯಲ್ಲಿ ಮಲಗಿಕೊಳ್ಳುತ್ತಾಳೆ. ಗೆಳತಿಯ ಪುಸ್ತಕದಲ್ಲಿ ಶ್ರೀಮಂತ ಯುವಕ ಪ್ರಸನ್ನನ ಪೋಟೋ ಇರುತ್ತದೆ. ರೇವತಿ ಮಾರನೆಯ ದಿನ ಹುತ್ತಗಳನ್ನು ನೋಡಲು ಹೋಗುತ್ತಾಳೆ. ಆಗ ಹಾವೊಂದು ಅವಳ ಕಾಲಿಗೆ ಹೆಡೆ ಅಪ್ಪಳಿಸುತ್ತದೆ
>
> ಮುಂದೆ ಓದಿ............

ರೇವತಿ ಈಗ ಪ್ರಸನ್ನನ ಕಡೆ ತಿರುಗಿದಳು. ಅವನು ಅವಳನ್ನ ಆರಾಧನ ಭಾವದಿಂದ ನೋಡುತ್ತಿದ್ದಾನೆ.

ಅವನ ನೋಟದಲ್ಲಿ ಒಲವಿನ ಛಾಯೆ ! ಮೈ ಪುಳಕಗೊಂಡಿತು !

ರೋಮಾಂಚನದ ಸಿಂಚನ. ರೇವತಿಯ ಮುಖ ಕೆಂಪೇರಿತು. ಅವಳು ತನ್ನ ನೋಟವನ್ನು ಬೇರೆ ಕಡೆ ತಿರುಗಿಸುತ್ತಾ "ನೀವು ನಿನ್ನೆಯದಿನ ನನಗೆ ಮುಖ್ಯ ಸಂಗತಿಯನ್ನೇ ಹೇಳಲಿಲ್ಲ"

ಪ್ರಸನ್ನ ಹುಬ್ಬೇರಿಸಿದನು.

"ಮೀನಳ ಸಾವಿನ ಸಂಗತಿ !" "ಓ.... ಅದಾ.....?"

"ನಿಮಗೆ ಅದು ಗೊತ್ತಿರಲಿಲ್ಲವೆ !"

"ಗೊತ್ತಿತ್ತು"

"ಮತ್ತ್ಯಾಕೆ ಹೇಳಲಿಲ್ಲ"

ಪ್ರಸನ್ನ "ಗೆಳತಿಯನ್ನು ನೋಡಲು ಸಂತೋಷ, ಸಡಗರದಿಂದ ಹೊರಟಿರುವಾಗ ಸಾವಿನ ಸಂಗತಿ ಹೇಳಿ ನಿಮಗೆ ನಿರಾಸೆ, ದುಃಖ ಉಂಟುಮಾಡಲು ಮನಸ್ಸು ಬರಲಿಲ್ಲ"

ಅವನತ್ತ ತೀಕ್ಷ್ಣವಾಗಿ ನೋಡಿದಳು.

ಪ್ರಸನ್ನ ಚಡಪಡಿಸಿದ್ದಾನೆ.

ಪ್ರೀತಿಸುತ್ತಿದ್ದಳು. ಎಂದು ಅವನ ವ ನೋಡಿದಳು.

ಮುಖದಲ್ಲಿ ಅದೇ ನಿರ್ಲಿಪ್ತತೆ !

ಬದಲಾಗದ ಭಾವನೆಗಳು !

ರೇವತಿಗೆ ಆಶ್ಚರ್ಯವಾಗುತ್ತಿದೆ.

ರೇವತಿ "ಆ ವ್ಯಕ್ತಿ ಯಾರು ಎ ಕೇಳುವುದಿಲ್ಲವೆ?"

ಪ್ರಸನ್ನ ಗಂಭೀರವಾಗಿ "ನನಗೆ ಸಂಬ ಪಡದ ವಿಚಾರದ ಬಗ್ಗೆ ನಾನು ತಲೆಕೆ ಕೊಳ್ಳುವುದಿಲ್ಲ.

"ಸುಳ್ಳು......" ಎಂದು ಕಿರುಚಿದಳು

ಪ್ರಸನ್ನ ಹುಬ್ಬೇರಿಸಿ ನೋಡಿದನು.

ರೇವತಿ ತುಸು ಧ್ವನಿ ಏರಿಸಿ "ಅವಳು.. ಅವಳು ನಿಮ್ಮನ್ನು ತುಂಬಾ... ತುಂ ಪ್ರೀತಿಸುತ್ತಿದ್ದಳು"

ಪ್ರಸನ್ನ ಈಗ ಬೆಚ್ಚಿಬಿದ್ದನು !

ಮುಖದಲ್ಲಿ ಅದೇನೋ ಬದಲಾವ

ಸಣ್ಣಗೆ ನಡುಗುತ್ತಿದ್ದಾನೆ.

ರೇವತಿ ಅವನ ಮುಖದ ಹತ್ತಿ ಬಾಗುತ್ತಾ "ಮೀನ ನಿಮ್ಮನ್ನು ಪ್ರೀತಿಸುತ್ತಿದ್ದು ನಿಮಗೆ ಗೊತ್ತಿರಲಿಲ್ಲವೆ?"

ಉತ್ತರಿಸಲಿಲ್ಲ ಪ್ರಸನ್ನ !

ನನಗೆ ಸತ್ಯ ಗೊತ್ತಾಗಬೇಕು"
ಪ್ರಸನ್ನ ಅವಳ ಮುಖವನ್ನೇ ನೋಡುತ್ತಾ
ಾ ಮೆಲು ಧ್ವನಿಯಲ್ಲಿ "ಗೊತ್ತಿತ್ತು !"
ೀವತಿ ಬೆಚ್ಚಿಬಿದ್ದಳು. ಹಾಗಾದರೆ ಮೀನಳ
ಯ ಬಗ್ಗೆ ಹೇಳಿದಾಗ ಮೊದಲು
ಪ್ತತೆಯ ನಾಟಕ ಏಕೆ ಆಡಿದೆ?
ನೋ....... ಏನೋ ನಡೆದಿದೆ !
ಈ ಶ್ರೀಮಂತನ ಚೆಲುವಾದ ಮುಖದ
ವ್ಯಾಘ್ರುತನ ಅಡಗಿದೆ ! ಮೀನಳ ಸಾವು
ತ ಅಲ್ಲ !
ಅವಳ ಸಾವಿನ ಹಿಂದೆ ಅದೇನೋ
ಾನಕ ಸತ್ಯ ಇದೆ ! ಈ ಚೆಲುವ ಪ್ರಸನ್ನನ
ಡ ಇರಬಹುದೆ? !

(ಮುಂದುವರೆಯುತ್ತದೆ)

## ಕೊಟ್ಟರೆ ವರ

ಅಂದು ಇಂದು ಸಮಾಜದ
ಕತ್ತರಿಗೆ ಸಿಕ್ಕಿರುವುದು ಹೆಣ್ಣು
ಜನ್ಮ ನೀಡುವ
ತ್ಯಾಗಮಯಿ..... ಅವಳು
ಧರ್ಮದ ಪುರುಷನ
ಅರಸಿ ಬಾಳುವ ಹೆಣ್ಣು
ಶತಮಾನಗಳ ಹಿಂದೆ...... ಹಿಂದೆ ||
ರೆಂಬುದು ಕತ್ತಲಾಗಿ
ಂಬುದು ಹಣತೆ ಎಂದು
ಸುವ ಜೀವಿ ಹೆಣ್ಣು ||
ಹಸಿವ ತಾಳಲು
ಗೋಧಿ ಸಕ್ಕರೆ ಕೊಂಡು
ಬಾಳುವುದು ಕರ್ತವ್ಯ....||
ಿ ಮಾಡಿ ಕೋರಿ ಹೊತ್ತು
ತ್ತಿನ ಗುಟುಕು ನುಂಗಿ
ಬೇಕು ಉಸಿರುನಂದುವ ತನಕ ||
ಪರದಾಟದ ಬಲೆಯೊಳಗಿನ
ಬದುಕಿನ ಸಾಗರದಲ್ಲಿ
ಹೆಣ್ಣು ಜೀವ, ಸ್ವತ್ತು ಕೊಟ್ಟು
ಅವನ ಬಲೆಗೆ ಸಿಲುಕುವ ಮೀನು ಈಕೆ
ಮತ್ತೆ ಅವನ ದಾಸಿಯಾಗಿ
ದಾರಿ ಕಾಣದೆ ತೊಳಲಾಡುವ
ಅಬಲೆಯರು ಲಕ್ಷಾಂತರ ||
ಗೆ ಉರುಳು ಬಿಗಿದುಕೊಂಡು
ಯುವರು ಹತ್ತಾರು ಮಂದಿ
ಶೆಗೆ ಮಿಲನ ನೂರಾರು
ಸದ ಬಲೆ ಅದೇ ||

ರಚನೆ : ಕುಲ್ಲಚನ ತಾರ ರವಿ

## ಮಹಾಭಾರತ ನಿಮಗಿದು ಗೊತ್ತೆ (ವಂಶಾವಳಿ)




(ಸುಮಾರು ೨೦೦ ವರ್ಷದ ಚರಿತ್ರೆ ಮಾತ್ರ) ಸಂಗ್ರಹ : ಪಟ್ಟಡ ನೀಶ

## ನಿಧನ

ಸಿದ್ದಾಪುರ, ಒಂಟಿಯಂಗಡಿ ನಿವಾಸಿ ಅಂಚೆಮನೆ ದಿ. ಚಿಣ್ಣಪ್ಪನವರ ಧರ್ಮಪತ್ನಿ ಚಿಣ್ಣಮ್ಮನವರು ದಿನಾಂಕ 27-6-1999ರಂದು ಕೈಲಾಸವಾಸಿಯಾದರು. ಇವರಿಗೆ 75 ವರ್ಷ ಪ್ರಾಯವಾಗಿತ್ತು. ಇವರು ಐದು ಗಂಡುಮಕ್ಕಳನ್ನು ಮೂರು ಹೆಣ್ಣು ಮಕ್ಕಳನ್ನು ಹಾಗೂ ಅಪಾರ ಬಂಧು ವರ್ಗದವರನ್ನು ಅಗಲಿದ್ದಾರೆ ಎಂದು ತಿಳಿದು ಬಂದಿದೆ.

# ಪತ್ರ ವಿಭಾಗ :

## "ಎಲ್ಲಿಂದಲೋ ಬಂದವರು"

"ಏನ್ ಸಾರ್...... ನಾನು ಕೊಡವರು ಹೊರದೇಶದವರು ಅಂದರೆ ಅವಮಾನ ಮಾಡಿದೆ ಅಂತಾರೆ! ಮೈಸೂರು ಮಿತ್ರದಲ್ಲಿ ಅವರು ಪ್ಯಾಲೆಸ್ಟೇನಿಯದವರೆಂದು ಬರೆದುಕೊಂಡಿದ್ದಾರೆ ಇದ್ಕೆ ಏನ್ ಹೇಳ್ತೀರಾ?" ಇಚ್ಚೀಕೆಗೆ ಚುನಾವಣೆ ಗೆದ್ದ ಈಗಾಗಲೇ ಕೊಡವರ ವಿರೋಧ ಕಟ್ಟಿಕೊಂಡ ಕೆ. ಟಿ. ಪೂವಯ್ಯನವರ ಪ್ರಶ್ನೆ.

"ನೀವು ಅವರ್ನ ಬೈದ್ರಿ - ಅದಕೇ ಗೆದ್ರಿ. ಆ ಸಿ.ಪಿ. ಗೋಪಾಲ್ ರಂಜನ್ ಮಾತ್ ಕಟ್‌ಕೊಂಡು ಸೋತಿದ್ದಾಯ್ತು." ಮೊದ್ಲು ಫಲಿತಾಂಶ ವಿಮರ್ಶೆ ನಡೀತು.

"ನೋಡಿ ಪೂವಯ್ಯ..... ಅಪ್ಪ ಅಮ್ಮ ಮಕ್ಳಿಗೆ 'ಥೂ ಕಳ್ಳಾ' ಹೀಗೆಲ್ಲ ಮುದ್ದು ಮಾಡ್ತ ಹೇಳ್ತಾರೆ. ಅದೇ ನೀವು ಹೀಗೆ ಕರ್‌ದ್ರೆ ಸಿಟ್ಟಾಗೊಲ್ವಾ? ನಾನು ಕೇಳಿದೆ.

ಸೋಮವಾರಪೇಟೆ ಚುನಾವಣೆಯಲ್ಲಿ ಸ್ಪರ್ಧಿಸಿದ್ದ ಪ್ರಜಾವೇದಿಕೆ ಸ್ಥಾಪಕ ಸದಸ್ಯರಾದ ಪೂವಯ್ಯ ಗೋಪಾಲ್ ಸ್ನೇಹಿತರು ! ಇಬ್ರು ಗಳಿಸಿದ್ದು 80% ಆದ್ರೆ ಕಾಂಗ್ರೆಸ್ 17% ಬಾಚಿತ್ತು. ಬಾಕಿ 3% ಜನತಾದಳ ಮತ್ತು ಕುಲಗೆಟ್ಟ ಮತಗಳು.

"ಅದೂನು ಸರಿಯೇ ಬಿಡಿ. ಅಲ್ಲಾ... ನಿಜವಾಗ್ಲೂ ಈ ಕೊಡವರು ಪರದೇಶಿಯರೋ ಹೇಗೆ? ನಿಮ್ಮ ಅಭಿಪ್ರಾಯ ಏನು ಹೇಳಿ."

"ನನ್ನ ಅಭಿಪ್ರಾಯ ಬೇಡ 1870ರಲ್ಲಿ ರೇ. ಜಿ. ರಿಕ್ತರ್ ಏನು ಬರೆದಿಟ್ಟಿದ್ದಾನೆ. ನೀವೆ ಓದಿಕೊಳ್ಳಿ" ಅಂತ ಗೆಜೆಟಿಯರ್ ಆಫ್ ಕೂರ್ಗ್‌ನ ಪುಟ 231-232 ಅನುವಾದ ಓದಲು ಕೊಟ್ಟೆ. ಅದು ಹೀಗಿದೆ :

ಕೊಡಗಿನ ಉತ್ತರ ಪೂರ್ವಭಾಗದಲ್ಲಿರುವ ಜನರು ಮೈಸೂರಿನವರಂತೆ ಹೋಲಿಕೆಯಲ್ಲಿ ಒಂದಾಗಿ ಕಾಣುತ್ತಾರೆ. ಮತ್ತು ರಾಜನ ಪ್ರಭಾವ ಸಹಜವಾಗಿ ಇವರಲ್ಲಿ ಅತ್ಯಧಿಕವಾಗಿದೆ. ಅಲ್ಲದೆ ಪಾಡಿ ನಾಲ್ಕು ನಾಡಲ್ಲಿ ಮಳೆಯಾಳಿ ಮೂಲವು ವಿಶೇಷವಾಗಿ ಕಾಣಿಸುತ್ತದೆ. ಹಾಗೆಯೇ ತಾವು ನಾಡು, ಬೇಂಗುನಾಡು ಮತ್ತು ಸೂರ್ಲಬಿ, ಮುತ್ತನಾಡುಗಳಲ್ಲಿ ಅರೆಭಾಷೆ ಗೌಡರ ಮತ್ತು ಬಂಟರ ಪ್ರಭಾವ ಅನುಭವಕ್ಕೆ ಬರುತ್ತದೆ. ಕೊಡವರು ಮಿಶ್ರಜನಾಂಗ ಎನ್ನುವುದಕ್ಕೆ ಇನ್ನೂ ಹೆಚ್ಚಿನ ಆಧಾರ ಬೇಕೆನ್ನುವುದಾದರೆ, ಅವರಲ್ಲಿರುವ ಮುಖ ಲಕ್ಷಣದ ವ್ಯತ್ಯಾಸ ಕಾಕೇಸಿಯನ್ ಮತ್ತು ಮಂಗೋಲಿಯನ್‌ರ ನಡುವೆ ಇರುವಷ್ಟು. ಹಾಗೆ ಮೈಬಣ್ಣದ ವ್ಯತ್ಯಾಸ ಬೆಳ್ಳಗೆ ಅಥವಾ ಕಪ್ಪಗೆ. ಕೊಡವ ಮನೆತನದ ಹೆಸರುಗಳು ಮೈಸೂರು, ತಮಿಳು, ಮಳೆಯಾಳಿ ಅಥವಾ ತುಳು ಮೂಲಗಳನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಕೊಡವ ಜನಾಂಗಕ್ಕೆ ಆಹ್ವಾನಿಸಿ ಸೇರಿಸಿಕೊಂಡದನ್ನು ಈಗಿನ ತಲೆಮಾರಿನವರು ನೆನಪಿಸಿಕೊಳ್ಳುತ್ತಾರೆ. ಕಿಗ್ಗಟ್‌ನಾಡಿನಲ್ಲಿ ಆರು ಕುಟುಂಬಗಳು ಹತ್ತು ವರ್ಷಗಳ ಹಿಂದೆ, ಮುಖ್ಯ ಶಿರಸ್ತೇದಾರ ನಂಜಪ್ಪ ಕೊಡವರಾಗಿ ಸ್ವೀಕರಿಸಿಕೊಂಡಿದ್ದು, ಆತನ ಮರಣನಂತರ, ಉಳಿದ ಕೊಡಪರು ತಮ್ಮ ಜನಾಂಗದಿಂಡ ಅವರನ್ನು ಹೊರಹ
ಪ್ರಕರಣ ಇಂದಿಗೂ ತೀರ್ಮಾನಕ್ಕೆ ಬಾಕಿ ಇದೆ. ಪ್ರಕರಣದ ತೀ
ಪ್ರಾಯಃ ಕೇವಲ ಸಮಯದ ವಿಚಾರ ಮಾತ್ರ ಎನ್ನಬಹುದೇ ಹೊ
ಕೊಡವರ ಕುಪ್ರಸಿದ್ಧ - ಹೊಂದಾಣಿಕೆ ಇಲ್ಲದ ವ್ಯವಸ್ಥೆಯಲ್ಲಿ ಒ
ಮೂಲದ ಬುಡಕಟ್ಟಿನವರನ್ನು ಒಂದು ಜನಾಂಗವನ್ನಾ
ವೈಗೂಡಿಸಿಕೊಳ್ಳುವುದು ರೂಢಿಯಾಗಿದೆ. ಇದಕ್ಕೆ ಕಾ
ಟಿಪ್ಪುಸುಲ್ತಾನ ಸಾವಿರಾರು ಕೊಡವ ಕುಟುಂಬಗಳನ್ನು ಶ್ರೀ
ಪಟ್ಟಣದ ಬಂಧನದಲ್ಲಿಟ್ಟು ಅವರಲ್ಲಿ ಬಹಳಷ್ಟು ಜನ
ಮುಸಲ್ಮಾನರಾಗಿ ಬಲಾತ್ಕಾರದಿಂದ ಮತಾಂತರಿಸಿದ್ದು ಅಲ್ಲದೆ ಅ
ರಾಜ್ಯಕ್ಕೆ ಹಿಂತಿರುಗಿದ ಮೇಲೆಯೂ, ಅವರು ಮತ್ತು ಅ
ಸಂತತಿಯು ಬ್ರಾಹ್ಮಣರ ಅಭಿಪ್ರಾಯದಂತೆ ಭ್ರಷ್ಟರಾಗಿ ತ
ಹಿಂದಿನ ಜಾತಿ ಕಳೆದುಕೊಂಡಿರುವುದು.

ಈ ಹಿಂದೆ 26-2-1972ರ "ಶಕ್ತಿ" ಪತ್ರಿಕೆಯಲ್ಲಿ ದಿ.
ಡಿ. ಸುಬ್ಬಯ್ಯ (ಕಾಕೆಮಾನಿ) ಕೊಡವರು ಕುರ್ದಿ ಜನಾಂಗದವ
ಟರ್ಕಿ ಹತ್ತಿರದಿಂದ ವಲಸೆ ಬಂದರೆಂದು ಲೇಖನ ಪ್ರಕಟಿಸಿದ್ದ
ಆಗ ಕೊಡಗಿನಲ್ಲಿ ಜಿಲ್ಲಾ ಪೋಲಿಸ್ ಅಧಿಕಾರಿಗಳಾಗಿದ್ದ
ರಾಮಾನುಜಂ ಅವರು ಬರೆದ "ಕೊಡವರು" ಎಂಬ ಗ್ರಂಥದ ಕೊ
ಅಧ್ಯಾಯ "ಕೊಡವರು ಕುರ್ದಿಗಳಲ್ಲ" ಇದನ್ನು ಓದುವುದು ಅ

ಹಾಗೆಯೇ ಗೌಡರು - ಬಂಗಾಳದಿಂದ ಬಂದ
ವಿಜಯನಗರದಿಂದ ಬಂದರು ಎನ್ನುವುದಕ್ಕೂ ಯಾವುದೇ ಆಧ
ಇಲ್ಲ. ಈ ಶತಮಾನದ ಐದನೇ ದಶಕದಲ್ಲಿ ಶೃಂಗೇರಿ ಮಠಕ್ಕೆ ನ
ಜನಾಂಗದಿಂದ ವಂತಿಗೆ ಸಂಗ್ರಹಿಸಲು ಕೆಲವರಿಗೆ ಮುದ್ರಿತ ಅಧಿ
ಪತ್ರ ಬಂದದ್ದು ಹಾಗು ಅದನ್ನು ನಮ್ಮ ಹಿರಿಯರು ತಿರಸ್ಕರಿಸಿ
ನನಗೆ ನೆನಪಿದೆ. ಇಂತಹ ಒಂದು ಪತ್ರ ಡಾ. ಪುರುಷೋತ್ತ
ಬಿಳಿಮಲೆಯವರ ಸಂಗ್ರಹದಲ್ಲಿದೆ. ತಿರುಪತಿ ವೆಂಕಟರವ
ಶಂಕರಾಚಾರ್ಯರ ಕಾಲಕ್ಕೆ ಮೊದಲು ಶೈವ ದೇವಸ್ಥಾನವಾಗಿ
ಎನ್ನುವ ವಾದ ಇದೆ. ನಾಥ ಪಂಥ ಚರಿತ್ರೆ ನಮ್ಮವರ ಪುರುಷಭ
ಆರಾಧನೆ ಸಂಶೋಧಕರ ಗಮನ ಸೆಳೆಯುತ್ತದೆ.

ಎನ್. ಎಸ್. ದೇವಿಪ್ರಸಾದ್, ಸಂಪಾ

## ಪ್ರಕಟಣೆ

ಪ್ರಿಯ ಸಂಗಾತಿ ಓದುಗರೆ ಮತ್ತು ಬರವಣಿಗೆಗಾರರಲ್ಲಿ ವಿನಂತಿ. ತಾವು ಕಳುಹಿಸಿಕೊಂಡುವ ಕಥೆ/ಕವನ/ಲೇಖನ ಇತ್ಯಾದಿಗಳನ್ನು ಕಳುಹಿಸುವಾಗ ಅದರ ಕೆಳಗೆ ತಮ್ಮ ಹೆಸರನ್ನು ಸೂಚಿಸುವುದಲ್ಲದೆ, ಸಂಗ್ರವಾಗಿದ್ದರೆ ಮೂಲ ಲೇಖಕರ/ರಚನೆಗಾರರ ಹೆಸರನ್ನು ಹಾಕಿ. ತಮ್ಮನ್ನು ಸಂಗ್ರಹಗಾರನೆಂದು ಬರೆದು ಕಳುಹಿಸುವಂತೆ ಇನ್ನೊಮ್ಮೆ ವಿನಂತಿ. ಈ ಬಗ್ಗೆ ಸಾಕಷ್ಟು ಸರ್ತಿ ಪತ್ರಿಕೆಯ ಲೇಖಕರಲ್ಲಿ ವಿನಂತಿಸಲಾಗಿದೆ. ತಮ್ಮ ಸ್ವಂತಿಕೆಯ ಬರವಣಿಗೆಯು ಮುಖ್ಯ

ಸಂಪಾದಕಿ

# ಗೌಡ ಸಂಸ್ಕೃತಿ : (ಹಿಂದಿನ ಸಂಚಿಕೆಯಿಂದ.......)

**ಸಲಾಯಿ ಅಳೆಯುವುದು :** ಕೈಶಾಲೆಯಲ್ಲಿ ಒಂದು ದೀಪ ಹಚ್ಚಿಟ್ಟು ಕುಂಟಿಗೆಯವನು ಬಟ್ಟೆಯನ್ನು ನೆಲಕ್ಕೆ ಹಾಸಿ ಮೊಣಕಾಲು ಊರಿ ಕುಳಿತುಕೊಳ್ಳಬೇಕು. ಮೂರು ಸೇರು ಅಕ್ಕಿಯನ್ನು ಕೆಳಗೆ ಬಟ್ಟೆಗೆ ಸುರಿದು ಕೈಯಿಂದ ಎರಡು ಪಾಲು ಮಾಡಬೇಕು. ಪ್ರತಿ ಪಾಲಿಗೂ ಐದು ಎಲೆ ಒಂದು ಅಡಿಕೆ ಇಡಬೇಕು. ಕ್ಷೌರಿಕನು ತಲೆಗೆ ಎಣ್ಣೆ ಹಚ್ಚಿ ತಲೆಗೆ ಬಟ್ಟೆ ಕಟ್ಟುವನು. ಮಡಿವಾಳನು ಒಂದು ಬದಿಯಿಂದಲೂ, ಕ್ಷೌರಿಕನು ಇನ್ನೊಂದು ಬದಿಯಿಂದಲೂ ಕುಂಟಿಗೆಯವನ ರಟ್ಟೆ ಹಿಡಿದು ಏಳಿಸುವರು. ಪಾಲು ಮಾಡಿದ ಅಕ್ಕಿ ಮತ್ತು ಮೊದಲೇ ತೆಗೆದಿಟ್ಟ ಕುಂಬಳಕಾಯಿ ಬಾಳೆಕಾಯಿಯನ್ನು ಮಡಿವಾಳ ಮತ್ತು ಕ್ಷೌರಿಕ ತೆಗೆದುಕೊಳ್ಳುತ್ತಾರೆ. ಇದಕ್ಕೆ ಸಲಾಯಿ ಅಳೆಯುವುದೆಂದು ಹೆಸರು. ಈ ಸಂದರ್ಭದಲ್ಲಿ ಕೆಲವು ಕಡೆ ಕುಂಟಿಗೆ ನಿಂತವನು ಹಣ ಪಡಕೊಳ್ಳುವನು. ಇನ್ನು ಕೆಲವು ಕಡೆ ಅಗಲು ಹಾಕಿದ ಕಡೆ ಹಣ ಇಡುತ್ತಾರೆ. ಈಗ ಸಾಮಾನ್ಯವಾಗಿ ಇದು ನಿಂತು ಹೋಗಿದೆ.

**ಮೃತರ ತಿಥಿ ಸಮಾರಂಭ (ಬೊಜ್ಜ) :** ಮೃತರ ಶವ ಸಂಸ್ಕಾರ ನಡೆದ ಐದನೆ ದಿನದಿಂದ ಹಿಡಿದು ಹನ್ನೊಂದನೆಯ ದಿನದ ಒಳಗೆ ಶುದ್ಧ ನಡೆಯಲೇ ಬೇಕು. ಕೆಲವರು ಅವರವರ ಅನುಕೂಲಕ್ಕಾಗಿ ಹತ್ತನೆ ದಿನ ರಾತ್ರಿ ನೀರು ನೆರಳಿಗೆ ಇಟ್ಟು ಹನ್ನೊಂದನೆಯ ದಿನ ಶುದ್ಧ ಮತ್ತು ದಿನ (ಬೊಜ್ಜ) ಎರಡನ್ನೂ ಮಾಡುವರು. ಶುದ್ಧವನ್ನು ಈ ಮೊದಲೇ ಮಾಡಿ ಮುಗಿಸಿದವರಾದರೆ ಹನ್ನೊಂದನೆಯ ದಿನ ಇಲ್ಲವೆ ಹದಿನಾರನೇಯ ದಿನ ತಿಥಿ (ಬೊಜ್ಜ) ಮಾಡುವರು. ತಿಥಿಯು ಮೃತರು ಜೀವಂತವಿದ್ದಾಗ ಬಹಳಷ್ಟು ಜನರೊಂದಿಗೆ ಸಂಪರ್ಕವಿಟ್ಟು ಕೊಂಡವರು. ಮೃತರಾದ ನಂತರ ತಮ್ಮೆಲ್ಲ ಬಂದುಬಳಗವನ್ನು, ನೆಂಟರಿಷ್ಟರನ್ನು, ಊರು ನೆರೆಕರೆಯವರನ್ನು ಕಳೆದುಕೊಂಡಂತೆ. ಅವರ ಗಳಿಕೆಯಲ್ಲಿ ಇಲ್ಲವೆ ಅವರಿಗಾಗಿ ಅವರ ಹೆಸರಿನಲ್ಲಿ ಮಕ್ಕಳು, ಮರಿ ಮಕ್ಕಳು ಸೇರಿ ಅವರನ್ನು ಸ್ಮರಿಸಿ ಸರ್ವರಿಗೂ ಅನ್ನದಾನವನ್ನು ಕೊಡುವುದು ಹಿಂದಿನಿಂದ ನಡೆದು ಬಂದ ಪದ್ಧತಿ. ಇದಕ್ಕೆ ತಿಥಿ ದಿನ, ಬೊಜ್ಜ ಎಂದೆಲ್ಲ ಕರೆಯುವರು.

ತಿಥಿ ಸಮಾರಂಭವು ಬಹಳಷ್ಟು ಸಡಗರದಿಂದ ನಡೆಯುವುದು. ಗೊತ್ತುಪಡಿಸಿದ ದಿನದಂದು ಸರ್ವರನ್ನು ಆಮಂತ್ರಿಸಿ ವಿವಿಧ ರೀತಿಯ ಭಕ್ಷ್ಯ ಭೋಜನವನ್ನು ಸಿದ್ಧಪಡಿಸಿ, ಮೊದಲು ಮೃತರ ಕೋಣೆಯಲ್ಲಿ ಮೃತರ ಬಾವ ಚಿತ್ರವಿದ್ದಲಿ, ಅದನ್ನು ಮೇಜಿನ ಮೇಲಿಟ್ಟು ಇಲ್ಲವೇ ಅವರು ಮಲಗುವ ಮಂಚದ ಮೇಲಿಟ್ಟು, ಅವರ ಬಾವ ಚಿತ್ರಕ್ಕೆ ಹೂವಿನ ಹಾರ ಹಾಕಿ ಅದರ ಸುತ್ತಲೂ ಅವರ ನಿತ್ಯ ಉಪಯೋಗದ ವಸ್ತುಗಳಾದ ಉಡುಪು, ಕೈಯ ವಾಚು ಊರುಗೋಲು, ಕನ್ನಡಕ ಮತ್ತು ಎಲ್ಲಾ ಆಭರಣಗಲನ್ನು ಇಟ್ಟು ಹಣತೆ ಹಚ್ಚಿಟ್ಟು ಭೋಜನಕ್ಕಾಗಿ ಮಾಡಿದ ಎಲ್ಲಾ ತಿಂಡಿ ತಿನಿಸುಗಳ ಎಡೆ ಹಾಕಿ, ಮುಖ್ಯವಾಗಿ ನೀರುದೋಸೆ, ರೊಟ್ಟಿ, ಕೋಳಿ ಸಾರು ಮುಂತಾದ ನಿತ್ಯ ಉಪಯೋಗಿಸುವ ಆಹಾರವನ್ನು ಎಡೆಗೆ ಬಡಿಸಿ ನಂತರ ಇತರ ಪದಾರ್ಥಗಳನ್ನೂ ಬಡಿಸುವುದು. ಮದ್ಯ ಸೇವಿಸುವವರಾದರೆ ಮದ್ಯವನ್ನು ಇಡುವರು. ಈ ಎಲ್ಲಾ ಪದಾರ್ಥಗಳನ್ನು ಬಡಿಸುವುದಕ್ಕೆ ಮುಂಚಿತವಾಗಿ ಗಣಪತಿಗೆ ಇಡುವ ಕ್ರಮವನ್ನು ಪಾಲಿಸಬೇಕು.

ತದನಂತರ ಸರ್ವರೂ ಸೇರಿ ಮೃತರ ಆತ್ಮಕ್ಕೆ ಶಾಂತಿಯನ್ನು ಕೋರಿ ಮೃತರನ್ನು ಸ್ಮರಿಸಿ ದೀಪಕ್ಕೆ ಅಕ್ಕಿ ಹಾಕುವರು. ತಿಥಿಗೆ ಬಂದ ನೆಂಟರಿಷ್ಟರು ತಂದ ತಿಂಡಿ ತಿನಿಸುಗಳನ್ನು ಮೃತರಿಗೆ ಬಡಿಸಿದ ಎಡೆಯ ಪಕ್ಕದಲ್ಲಿಟ್ಟು ಅವರು ವಂದಿಸುವರು. ಅತಿಥಿಗಳೆಲ್ಲರನ್ನೂ ಭೋಜನ ಮಾಡುವಂತೆ ನಿವೇದಿಸಿಕೊಳ್ಳುವುದು ಕ್ರಮ. ತಿಥಿಯ ಭೋಜನದಲ್ಲಿ ಮಾಂಸದ ಅಡಿಗೆಯನ್ನು ಏರ್ಪಡಿಸುವುದು ಸಾಮಾನ್ಯ. ಗೌಡರ ಸಂಪ್ರದಾಯದಲ್ಲಿ ಶುದ್ಧ ಕಳೆಯುವವರೆಗೆ ಮದ್ಯಮಾಂಸಗಳ ಬಳಕೆಗೆ ನಿಷೇದವಾಗಿದ್ದರೂ ಇದು ಹಿಂದಿನಿಂದಲೂ ನಡೆದು ಬಂದ ಪದ್ಧತಿ. ಇದಾದ ನಂತರ ಮೃತರಿಗೆ ಹದಿನಾರರ ಕೊಲೆಗೆ ಸೇರಿಸುವ ಕ್ರಮವಿರುವುದು.

**ಹದಿನಾರರ ಕೊಲೆಗೆ ಸೇರಿಸುವಿಕೆ :** ಮೃತನು ಸತ್ತ ಹದಿನಾರನೆಯ ದಿವಸ ಅಕ್ಕಪಕ್ಕದ ನಾಲ್ಕಾರು ಜನರನ್ನು ಮನೆಗೆ ಆಮಂತ್ರಿಸಬೇಕು. ಒಂದು ಹುಂಜ ಕೋಳಿಯನ್ನು ಕೊಂದು ಸಾರು ಮಾಡಬೇಕು. ಜೊತೆಗೆ ನೀರುದೋಸೆ ರೊಟ್ಟಿ ಕೊಡಬೇಕು. ಅಡಿಗೆ ಕೆಲಸ ಮುಗಿದ ನಂತರ ಅಗಲು ಹಾಕುವ ಕೋಣೆಯನ್ನು ಸ್ವಚ್ಛಗೊಳಿಸಿ ಹದಿನೈದು ಚಿಕ್ಕ ಚಿಕ್ಕ ಬಾಳೆ ಎಲೆಯನ್ನು ಸಾಲಾಗಿ ಇಡಬೇಕು. ಇನ್ನೊಂದು ಬಾಳೆ ಎಲೆಯನ್ನು ಸಾಲಿಗಿಂತ ಸ್ವಲ್ಪ ದೂರದಲ್ಲಿ ಹಿಂಭಾಗದಲ್ಲಿಡಬೇಕು. ಒಂದು ಬಟ್ಟಲಿಗೆ ಒಂದೆರಡು ದೋಸೆ, ಒಂದು ರೊಟ್ಟಿಯನ್ನು ಸಣ್ಣಗೆ ಚೂರು ಮಾಡಿ ಕೋಳಿ ಸಾರನ್ನು ಅದಕ್ಕೆ ಹಾಕಿ ಮಿಶ್ರ ಮಾಡಬೇಕು. ತದನಂತರ ಕುಂಟಿಗೆ ನಿಂತವನು ಎಲ್ಲಾ ಬಾಳೆ ಎಲೆಗೆ ಸ್ವಲ್ಪ ಸ್ವಲ್ಪವಾಗಿ ಬಳಸಬೇಕು. ಪ್ರತಿ ಎಲೆಯ ತುದಿಗೆ ಒಂದೊಂದು ಎಣ್ಣೆ ಬತ್ತಿಯನ್ನು ಇಟ್ಟು ಹಚ್ಚಬೇಕು. ಅನಂತರ ಗಂಧಧೂಪವನ್ನು ಕೊಟ್ಟು ಎಲ್ಲರಿಗೂ ಸ್ವಲ್ಪ ಸ್ವಲ್ಪ ಅಕ್ಕಿಕೊಟ್ಟು, ಯಾರಾದರೂ ಹಿರಿಯರೊಬ್ಬರೂ ಸತ್ತವನ ಗುಣಗಾನವನ್ನು ಹೇಳಿ ಹಿಂತೆ ಸತ್ತವರೊಂದಿಗೆ ನೀನು ಸೇರಿಕೊಂಡು ನಮ್ಮೆಲ್ಲರನ್ನು ರಕ್ಷಿಸು ಎಂದು ಪ್ರಾರ್ಥನೆ ಮಾಡಿ ಹಿಂದೆ ಇಟ್ಟಿದ ಒಂದು ಎಲೆಯನ್ನು 15ನೇ ಎಲೆಯೊಂದಿಗೆ ಸೇರಿಸಬೇಕು. ಆಗ ಮೊದಲು ಸತ್ತವರೊಂದಿಗೆ ಈತನು ಸೇರಿಕೊಳ್ಳುವನೆಂದು ನಂಬಿಕೆ. ಹೀಗೆ ಎಲೆಯನ್ನು ಸೇರಿಸಿದ ನಂತರ ಎಲ್ಲರು ಊಟ ಮಾಡಿ ತಾಂಬೂಲ ಸೇವಿಸಿ ಅವರವರ ಮನೆಗೆ ಹೋಗುತ್ತಾರೆ.

**ಪಿಂಡ ಹಾಕುವುದು :** ಮೃತನ ದೀಕ್ಷೆಗೆ ನಿಂತವನು ಶುದ್ಧದ ದಿನದಂದು ಗಡ್ಡ, ಮೀಸೆ, ತಲೆಕೂದಲನ್ನು ಬೋಳಿಸಿದ ನಂತರ ಪಿಂಡ ಹಾಕುವವರೆಗೆ ಗಡ್ಡ, ಮೀಸೆ, ತಲೆ ಕೂದಲನ್ನು ತೆಗೆಯಬಾರದು. ಪಿಂಡ ಹಾಕುವುದೆಂದರೆ ಸತ್ತವನಿಗೆ ಮೋಕ್ಷ ಸಿಗಲಿ ಎಂದು ಮಾಡುವ ಕ್ರಮ. ಕಾವೇರಿಯಂತಹ ಪುಣ್ಯ ಕ್ಷೇತ್ರದಲ್ಲಿ ಪಿಂಡ ಹಾಕುವ ಸಮಯದಲ್ಲಿ (ಕಾವೇರಿ ಸಂಕ್ರಮಣ) ಪಿಂಡದ ಸಾಮಾನುಗಳನ್ನು ಮಾರುವ ಸ್ಥಳಗಳಿರುತ್ತವೆ. ಮತ್ತು ತಲೆ ಕೂದಲು ಗಡ್ಡ, ಮೀಸೆ ಬೋಳಿಸಲು ಕ್ಷೌರಿಕರು ಇರುತ್ತಾರೆ. ಮೊದಲು ಸಂಗಮದಲ್ಲಿ ಮುಳುಗಿ ಸ್ನಾನ ಮಾಡಿದ ನಂತರ ಕ್ಷೌರಿಕನಿಂದ ತಲೆಗೂದಲು, ಗಡ್ಡ ಮೀಸೆ ಬೋಳಿಸಿ ಕಾಣಿಕೆ ಕೊಟ್ಟು ಪುನಃಹ ಸ್ನಾನ ಮಾಡಬೇಕು. ತದನಂತರ ಪಿಂಡದ ಸಾಮಾನು ಮಾರುವ ಸ್ಥಳಕ್ಕೆ ಹೋಗಿ ಅಲ್ಲಿ ಪಿಂಡದ

ಸಾಮಾನು ಇರುವ ಎಲೆಯನ್ನು ಖರೀದಿಸಿ ನೇರವಾಗಿ ನದಿಯ ಆಚೆ ಬದಿಯಲ್ಲಿ ಕುಳಿತಿರತಕ್ಕ ಪುರೋಹಿತ (ಬ್ರಾಹ್ಮಣನ) ಹಸ್ತ ಕೊಡತಕ್ಕದ್ದು ಪುರೋಹಿತನು ಹೇಳಿದಂತೆ ಅವನ ಎದುರಿನಲ್ಲಿ ಕುಳಿತು ಕೆಲವು ಮಂತ್ರೋಚ್ಛಾರಗಳನ್ನು ಹೇಳಿದ ನಂತರ, ಅವನು ಹೇಳಿದಂತೆ ದೀಕ್ಷಿತನಿಗೆ ಹೇಳಲು ಹೇಳುವನು. ಕೈಯ ಬೆರಳಿಗೆ ದರ್ಬೆಯನ್ನು ಕಟ್ಟಿ ಪಿಂಡದ ಎಲೆಗೆ ನೀರು ಬಿಟ್ಟು, ಪುರೋಹಿತ ಹೇಳಿದಂತೆ ಮಾಡುವುದು. ಪಿಂಡದ ಎಲೆಯನ್ನು ಸಂಗಮದಲ್ಲಿ ಬಿಟ್ಟು ನೀರಿನಲ್ಲಿ ಮುಳಿಗಿ ಸ್ನಾನಮಾಡಿ ಮಡಿ ಬಟ್ಟೆಗಳನ್ನು ತೊಟ್ಟು ಪುರೋಹಿತನ ದಕ್ಷಿಣೆಕೊಟ್ಟು ಮೊದಲೇ ತಂದ ಹಣ್ಣು ಕಾಯಿ ಫಲಾಮೃತದೊಂದಿಗೆ ದೇವಸ್ಥಾನದ ಪೂಜೆಗೆ ಹೋಗುವುದು. ದೇವರಿಗೆ ಪೂಜೆ ಸಲ್ಲಿಸಿ ತೀರ್ಥಪ್ರಸಾದ ಸ್ವೀಕರಿಸಿ ಮನೆಗೂ ತಂದು ಮನೆಯವರಿಗೆ ಕೊಡುವುದು. ಇಲ್ಲಿಗೆ ಪಿಂಡ ಹಾಕುವ ಕ್ರಮ ಮುಗಿಯಿತು.

– ಮುಂದುವರೆಯುತ್ತದೆ.

## ಗೀತ ಸಾರಾಂಶ

ಆದದೆಲ್ಲಾ ಒಳ್ಳೆಯದಕ್ಕೆ ಆಗಿದೆ
ಆಗುತ್ತಿರುವುದೆಲ್ಲಾ ಒಳ್ಳೆಯದೇ ಆಗುತ್ತಿದೆ
ಆಗಲಿರುವುದು ಅದು ಒಳ್ಳೆಯದೇ ಆಗಲಿದೆ
ರೋಧಿಸಲು ನೀನೇನು ಕಳೆದುಕೊಂಡಿರುವೆ?
ಕಳೆದುಕೊಳ್ಳಲು ನೀನು ತಂದಿರುವುದಾದರು ಏನು?
ನೀನೇನು ಪಡೆದಿದ್ದರೂ ಅದನ್ನು ಇಲ್ಲಿಂದಲೇ ಪಡೆದಿರುವೆ
ಏನನ್ನು ನೀಡಿದ್ದರೂ ಅದನ್ನು ಇಲ್ಲಿಗೇ ನೀಡಿರುವೆ
ನಿನ್ನೆ ಬೇರೆಯಾರದ್ದೋ ಆಗಿದ್ದುದು ಇಂದು ನಿನ್ನದಾಗಿದೆ
ಮತ್ತು ನಾಳೆ ಇನ್ಯಾರದ್ದೋ ಆಗಲಿದೆ.

ಸಂಗ್ರಹ : ಕಾಸ್ಪಾಡಿ ಮೋನಪ್ಪ
ಬೆಂಗಳೂರು

## ನ್ಯಾಯಾಂಗ ಸಂಬಂಧಿ ಸಂಕೇತಾಕ್ಷರಗಳು ಮತ್ತು ಅವುಗಳ ವಿಸ್ತಾರ ರೂಪ

1. F. I. R. : First Information Report (ಪ್ರಥಮ ಮಾಹಿತಿ ವರದಿ)
2. P. I. L. : Public Interest Litigations (ಸಾರ್ವಜನಿಕ ಹಿತಾಸಕ್ತಿ ದಾವೆಗಳು)
3. N. B. W. : Non Bailable Arrest Warrant (ಜಾಮೀನುರಹಿತ ಬಂಧನ ಆಜ್ಞಾಪತ್ರ)
4. C. C. : Criminal Case (ಕ್ರಿಮಿನಲ್ ಮೊಕದ್ದಮೆ)
5. P. C. : Private Complaint (ಖಾಸಗಿ ದೂರು)
6. J. M. F. C. : Judicial Magistrate of First Class (ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿ)
7. C. J. M. : Chief Judicial Magistrate (ಮುಖ್ಯ ನ್ಯಾಯಿಕ ದಂಡಾಧಿಕಾರಿ)
8. C. M. M. : Chief Metropolitan Magistrate (ಮುಖ್ಯ ಮೆಟ್ರೋಪಾಲಿಟನ್ ದಂಡಾಧಿಕಾರಿ)
9. H. C. : High Court (ಉಚ್ಚ ನ್ಯಾಯಲಯ)
10. S. C. C. : Small Causes Court (ಲಘು ವ್ಯಾಜ್ಯಗಳ ನ್ಯಾಯಾಲಯ)
11. S. C. : Supreme Court (ಸರ್ವೋಚ್ಚ ನ್ಯಾಯಾಲಯ)
12. A. P. P. : Assistant Public Prosecutor (ಸಹಾಯಕ ಸರಕಾರಿ ಅಭಿಯೋಜಕರು)
13. P. P. : Public Prosecutor (ಸರಕಾರಿ ಅಭಿಯೋಜಕರು)
14. S. P. P. : State Public Prosecutor (ರಾಜ್ಯ ಸರಕಾರಿ ಅಭಿಯೋಜಕರು)
15. D. G. P. : Director General of Prosecutions (ಅಭಿಯೋಜನೆಯ ನಿರ್ದೇಶಕ ಜನರಲ್)
16. O. S. : Original Suit (ಮೂಲ ದಾವೆ)
17. C. J. I. : Chief Justice of India (ಭಾರತದ ಮುಖ್ಯ ನ್ಯಾಯಮೂರ್ತಿಗಳು)
18. C. J. : Civil Judge (ವ್ಯವಹಾರಿಕ ನ್ಯಾಯಾಧೀಶರು) Chief Justice (ಮುಖ್ಯ ನ್ಯಾಯಮೂರ್ತಿಗಳು)
19. CR. P. C. : Criminal Procedure Code (ದಂಡ ಪ್ರಕ್ರಿಯಾ ಸಂಹಿತೆ)
20. I. P. C. : Indian Penal Code (ಭಾರತದ ದಂಡ ಸಂಹಿತೆ)
21. C. P. C. : Civil Procedure Code (ಸಿವಿಲ್ ಪ್ರಕ್ರಿಯಾ ಸಂಹಿತೆ)
22. A. G. P. : Assistant Government Pleader (ಸಹಾಯಕ ಸರಕಾರಿ ನ್ಯಾಯವಾದಿ)
23. M. R. T. P. Act : Monopoly And Restrictive Trade Practices (Prevention) Act
24. Copra Or C. P. A. : Consumer Protection Act
25. SAFEMA : Smugglers and Foreign Exchange Manipulators (Prevention) Act
26. FERA : Foreign Exchange Regulations Act
27. COFEPOSA : Conservation of Foreign Exchange And Prevention of Smuggling Act

ಬಿ. ಕೆ. ಶ್ರೀಧರ, ಮಡಿಕೇರಿ

# ಅಕ್ಕಯ್ಯಾ, ತಲೆ ಸ್ಪೀಡಾಗಿ ಓಡ್ದೆ........

ಒಂದಿನ ತಂಗೆನೂ ತಂಗೆದ್ ನಾಲ್ಕು ವರ್ಷದ ಹೆಣ್‌ಕೂಸುನೂ ಅಕ್ಕನ ಮನೆಗೆ ಬಂದೊ. ಅಪೂರ್ವಕೆ ತಂಗೆ ಬಂದದ್‌ತೇಳಿ ಅಕ್ಕಂಗೆ ಕುಸೀ ಆತ್. ಕಾಲಿಗೆ ನೀರ್ ಕೊಟ್ಟತ್. ತಲೆಗೆ ಎಣ್ಣೆ ಪೂಜಿತ್. ಕುಡೆಕೆಲ್ಲಾ ಕೊಟ್ಟಾತ್. ಮಧ್ಯಾಹ್ನದ ಊಟ ಮಾಡ್ದೊ. ಅಕ್ಕನ ಇಬ್ಬರು ಮಕ್ಕಳಿಗೆ ಪರಮಾನಂದಾತ್. ಆಡಿಕೆ ಸಣ್ಣ ಕೂಸು ಸಿಕ್ಕಿರೆ ಮಕ್ಕಳಿಗೆ ಇನ್ನೇನ್ ಬೇಕು ಹೇಳಿ? ಸಣ್ಣವ್ವನ ಕೂಸುನ ಕರ್ಕಂಡ್ ಆಟಕ್ಕೆ ಹೊರ್‍ಡೊ. ಹೊದವು ಎಲ್ಲೆಲ್ಲಿ ಹೋದೋಂತೇಳಿಕಾಕಿಲ್ಲೆ. ಕರ್‌ಗ ಎಲ್ಲೆಲ್ಲೊ ಓಡಾಡುವಂಗೆ ಮಕ್ಕಳೂ ಓಡಾಡಿವೆ. ಹಂಗೆ ಈ ಮಕ್ಕಳೂ ಸುತ್ತಾಡ್ದೊ. ಗದ್ದೆ, ತೋಡು, ತೋಟ, ಹಟ್ಟಿಗೆಲ್ಲಾ ಹೋಗಿ ಬಂದೋ. ಎಲ್ಲೇ ಹೋಗಲಿ ಈ ಕೂಸುನ ಮಾತ್ರ ನೆಲಕ್ಕೆ ಇಳ್ಸಿತ್ಲೆ. ಸೊಂಟಲಿ ತೆತ್ತಿಕಂಡೇ ತಿರ್‍ಗಾಡ್ದೊ. ಕೂಸಿಗಂತೂ ಕುದುರೆ ಸಿಕ್ಕಿದಂಗಾತ್.

ಇತ್ತ, ಅಕ್ಕನೂ ತಂಗೆನೂ ಪಟ್ಟಾಂಗ ಸುರು ಮಾಡ್ದೊ. ಭಾವ ಎಲ್ಲಿಗೆ ಹೋಗೋಳೊಂತ ತಂಗೆ ಕೇಳ್ತ್. ಈ ಹಾಳ್ ದನಗ ಹಟ್ಟಿಗೆ ಬಾದುಲೆ. ನಾಳೆಂದ ಹೂಡಿಕೆ ಸುರು ಮಾಡೊಕುಂತ ಹೇಳ್ತಾ ಇದ್ದೊ. ಊಡಿಕಾಕನಾರೂ ದನಗ ಹಟ್ಟಿಲಿ ಇಲ್ಲದಿದ್ದರೆ ಹೆಂಗೆ, ನಾ ಹೋಗಿ ಹುಡಿಕಂಡ್ ಬನ್ನೆಂತ ಕತ್ತಿ ತಕ್ಕಂಡ್ ಅತ್ತೆಲ್ಲೋ ಹೋಗೋಳೊಂತ ಅಕ್ಕ ಹೇಳ್ತ್. ಸಣ್ಣತರ್‌ಲಿ ನಾವು ಎಂಥೆಂಥಾ ಆಟ ಆಡ್ತಿದ್ದೊ. ಆ ಕಥೆ ಈ ಕಥೆನೆಲ್ಲಾ ಹೇಳಿಕಂಡ್ ಇಬ್ಬರು ನಗಾಡ್ದೊ. ಹಂಗೆ ಹಿಂಗೆಲ್ಲಾ ಮಾತಾಡಿ ಆಕನ ನಾಕಂಟೆದ್ ಕಾಫಿ ಕುಡೆನೋಂತ ಆತ್. ಕಾಫಿನೂ ಕಾಸಿ ಕಂಡೊ. ಮಕ್ಕಮರಿ ಎಲ್ಲಾ ಕೂಡಿಕಂಡ್ ಕುಡಿತಾ ಇರಕನ ತಂಗೆದ್ ಕೂಸು ಒಂದ್ ಗಲಾಸ್ ಕಾಫಿನ ಕಂಕಣಿ ಹಿಡ್ತ್. ಅಷ್ಟೊತ್ತಿಗೆ ಅದರ ಬೆನ್ನಿಗೆ ಗಂಯ್ಕಂತೇಳಿ ಒಂದ್ ಗುದ್ದೂ ಅಯ್ಯೆನ ಕೈಂದ ಬೀತ್. "ಏ, ಹೊಡಿ ಬ್ಯಾಡನೆ, ಕೂಸಲ್ಲಂತ" ಅಕ್ಕ ಸಮಾಧಾನ ಹೇಳಿ ಕೂಸುನ ಎಳ್ದ್ ಮಡ್ಲ್‌ಲಿ ಕೂರ್‍ಸಿಕಂಡತ್ ಇಷ್ಟೆಲ್ಲಾ ಆಕನ ಪೋಲಿ ದನಗಳ ಹುಡ್ಕಿಕೆ ಹೋದ ಗಂಡ ಬೇಕಾದ ಎರಡ್ ಎತ್ತ್‌ಗಳ ಮಾತ್ರ ಹೊಡ್ಕಂಡ್ ಬಾರದ್ದ ದನಗಳ ಯಾರ್‍ಯಾರ ತೋಟಲಿ ಹಾಳ್‌ಬೀಳಿಕೆ ಬುಟ್ ಬಾತ್. ಮನೆಲಿದ್ದ ನಾದಿನೀನ ಕಂಡ್ "ಓಹೋ ಎಟ್ಟೊತ್ತಿಗೆ ಬಂದನೇ ಚಿಮ್ಮೀಂತ" ಕೇಳ್ತ್. ಆಗ ನಾದಿನಿ ಮಧ್ಯಾಹ್ನನೇ ಬಂದೋ ಭಾವಂತೇಳಿ ಕಾಲಿಗೆ ಬೀತ್. ಕೂಸುನ ಎಳ್ಕಂಡ್ "ದೊಡ್ಡಪ್ಪನ ಕಾಲ್ ಚಾಮಿ ಮಾಡ್‌ತ" ಹೇಳಿ ಅದರ ಕುತ್ತಿಗೆನ ದೊಡ್ಡಪ್ಪನ ಕಾಲಿಗೆ ಬಗ್ಗಿಸಿತ್. ದೊಡ್ಡಪ್ಪನ ಕಾಲ್‌ಲಿದ್ದ ಉಂಬುಳುನ ಕಂಡ್ ಕೂಸು "ಯಬೇ ಬುಂಬುಂ" ತೇಳಿ ಕಂಡ್ ಹೆದ್ರಿ ಹಿಂದಕೆ ಬಾತ್. ನೋಡಿಕೆ ಕಾಲ್‌ಲಿ ನಾಕೈದ್ ಉಂಬುಳುಗ ಪೇಚಾಡ್ತಾ ಇದ್ದೊ.

ಅಕ್ಕ ಕೋಳಿಗೂಡ್ ಕಡೆ ಹೋತು. ಉಕ್ಕುಡೆ ಬತ್ತನ ಹರ್‌ಡಿಕಂಡ್ ಕೋಳಿ ಬಾ ಬಾ ಬಾಂತ ರಾಗ ಎಳ್ದ್ ಕೋಳಿಗಳ ಕರ್ತ್. ಹತ್‌ಹದ್ನೈಗ್ ಕೋಳಿಗ ಅಲ್ಲಿಂದ ಇಲ್ಲಿಂದೆಲ್ಲಾ ಬಂದ್ ಸೇರಿಕಂಡೊ. ಚುಳ್ಳು ಚುಳ್ಳು (ಕಡ್ಲೆ ಕಡ್ಲೆ) ಲಾಕಿನ ಹಿಡ್ಕಂಡ್ "ಇದೇನಿ ಇದರ ಕುತ್ತಿಗೇನ ಮುರೇನೀಂತ" ಗಂಡನ ಕೈಗೆ ಲಾಕಿನ ಕೊಟ್ಟತ್. ಆಗ ತಂಗೆ ಮಾತಿಗಾರ್ ಹೇಳೊಕಲೇಂತ "ಇದೆಲ್ಲಾ ಯಂತಕೆ ಭಾವ, ಅದರ ಬುಡಿ ಭಾವಾಂತ ಹೇಳ್ತ್. ನೀ ಸುಮ್ಮನಿರ್ ಅಪೂರ್ವಕೆ ಬಂದೊಳಾಂತ ಭಾವ ಹೇಳಕನ ಈ ಕೂಸು "ಆ ಕೋಳಿನ ಯಂತ ಮಾಡ್ತು? ಕೊರ ಕೊರ ಮಾಡಿ ಕಿಕ್ಕಿ ಮಾಡಿಕಾ" ಹಿಂಗೆ ಕೇಳಕನ ಹೌದೂಂತ ಹೇಳ್ದ ದೊಡಪ್ಪ ಕೋಳಿನ ಕೊಂದ್ ಹಾಕಿತ್. ಆಗ ಆ ಹುಂಜ ಒದ್ದಾಡ್ತಾ ಇರಕನ "ಅಯ್ಯೋ ಪಾಪ ಪಾಪಂತ ಕೂಸು ಬೇಜಾರ ಮಾಡಿಕಂತ್. (ಕರುಣೇಂತೇಳ್ದು ಮಕ್ಕಳ ಸಹಜ ಗುಣ !) ಸರಿ, ಕೋಳಿನ ಅಚ್‌ಕಟ್ ಮಾಡಿ ಆತ್. ಒಂದ್ ಗಂಜಿ ಪಾತ್ರ ತುಂಬ ಮಾಸ **ತುಂಬಿತ್**. ನೋಡು, ಎರಡ್ ಕೇಜಿ ಆದುನೇಂತ ಹೆಣ್‌ನ ಕೇಳಕನ ಉಮ್ಮಪ್ಪ ಇರ್‍ದುತ ಕಂಡದೆಂತ ಹೆಣ್ ರಾಗ ಎಳ್ತ್. ಇದರ ಗೈಪು ಗಸಿಗಸಿ ಮಾಡ್. ಮಂಡಿಗಂಟ ನೀರ್ ಮಾಡ್‌ಬಡಂತ ಗಂಡ ಹೇಳಿ ಹೊರಗೆ ಹೋತು.

ರಾತ್ರಿಗೆ ತುಪ್ಪದನ್ನ ಕೋಳಿಗೈಪು ರೆಡಿ ! ಹಞ ಬೆಸಗೆಲಿ ಇಸಿನೆ. ಮತ್ತೆ ಮಕ್ಕಳಿಗೆ ಊಟ ಕೊಡನೊ. ಮಕ್ಕಳಾದ ಮೇಲೆ ದೊಡ್ಡೊವು ಉಂಬೊನೊಂತ ಹೆಣ್ ಹೇಳ್ತ್. ಸರಿ, ಹಂಗೆ ಹೇಲಿ ಬೆಸ್‌ಗೆಲಿ ಇಸಿತ್. ಮಕ್ಕಳಿಗೂ ಇಕ್ಕಿತ್. ಅವು ಉಂಡೊ. ಎದ್ದ್ ಕೈ ತೊಳ್ದ್ ಆಟಕ್ಕೆ ಸುರ್‍ಮ ಮಾಡ್ದೊ. ಈಗ ತಂಗೆ, ಅಕ್ಕ, ಭಾವ ಊಟಕ್ಕೆ ಕುದ್‌ಕಂಡೊ. "ಮಿಲ್ಟ್ರಿ ರಮ್" ಇತ್ತ್. ಮೂರು ಗಲಾಸ್ ಇಸಿಕಂಡೊ. ಮುಂದೆ ನಾದಿನಿಗೆ ರಮ್ ಹೊಯ್ಯಕನ "ಬೇಡ ಭಾವಾ"ತ ಹೇಳ್ತ್. ಹೇ, ಇದೇನಾದುಲೆ, ಉಂಬೊದು ಮಲ್ಗುದುತಾನೆ, ಬರೀ ಎರಡ್ ಬೆರಳ್ ಹೊಯ್ದೊಳೆಂತ ಹೇಳಿ ಹೊಯ್ದ್ ಕೊಟ್ಟತ್. ಹೆಣ್ಣಿಗೂ ಹೊಯ್ತ್. ತಾನೂ ಹೊಯ್ಕಂಡತ್. ನಾದಿನಿಗೆ ಪುನಾ ಎರಡ್ ಬೆರಳ್ ಹೊಯ್ತ್. ಹಿಂಗೆ ಎರಡ್ ಬೆರಳ್, ಮೂರು ಬೆರಳ್ ಕುಡ್ದಾಕನ ನಾದಿನಿ ಟೈಟ್ ಆತ್. ಹೆಣ್ ಸಮಾ ಕುಡ್ತ್. ಹೆಣ್‌ಗೆ ಕುಡ್ದುಕುಡ್ದು ಪ್ರಾಕ್ಟೀಸ್ ಉಟ್ಟು. ಹಂಗಾಗಿ ಹೆಣ್ ಗಂಡಗ, ಗಂಡ ಟ್ಯಾಂಕರ್. ನಾದಿನಿ ಟೈಟ್. ಕುಪ್ಪಿ ಅಡ್ಡಬೀತ್. ನಾದಿನಿ ಗೋಡೆಗೆ ಒರಗಿತ್. ಅಲ್ಲಿಗೇ ಕೈ ತೊಳೆಕೆ ನೀರ್ ತಂದ್ ಅಕ್ಕನೇ ಕೈ ತೊಳ್ಸಿತ್. ಎಲೆ ಅಡಿಕೆ ಅಲ್ಲಿಗೆ ತಂದ್ ಕೊಟ್ಟೊ. ಅಕ್ಕಯ್ಯ ದೀಪ ಎರಡ್ ಉಟ್ಟಾಂತ ಒಂದ್ ದೀಪದ ಕಡೆ ಕೈ ತೋರ್‍ಸಿತ್. ಇಲ್ಲೆನೆ ನಿಂಗೆ ಹಂಗೆ ಕಾಂಬೊದುಂತ ಹೇಳಿಕಂಡ್ ನಗಾಡ್ದೊ.

ಇನ್ ಮಲ್ಗನೊ. ರಾತ್ರೆ ಹತ್ ಗಂಟೆ ಆತ್. ಬಾ ನೀನೂ ಕೂಸುನು ಆ ಕಟ್ಲ್‌ಲಿ ಮಲ್ಕಣೀಂತ ಕಟ್ಲ್ ತೋರ್‍ಸಿತ್. ತಂಗೆಗೆ ಕುದ್ದಲ್ಲಿಂದ ಏಳಿಕೆ ಆದೆಯಾ? ಹುಂ ! ಸುತಾರಾಂ ಆಗ್ತಾ ಇಲ್ಲೆ. ಮೈಮೇಲೆ ಬಂದವು ಕುಣ್ದ್ ಕುಣ್ದ್ ಕಡೆಗೆ ದೇವ್ರು ಪಿರಿಯಕಾಕನ ಅವನ ಹಿಡ್ಕಂಡ್ ನಡ್ಸಿಕಂಡ್ ಹೋದವಲ್ಲಾ ಹಂಗೆ ತಂಗೆನ ನಡ್ಸಿ ಕಂಡ್ ಹಾಸಿಗೆಗೆ ಕರ್ಕಂಡ್ ಹೋತು. ಹಾಸಿಗೆಗೆ ತಲೆ ಕೊಟ್ಟದೇ ತಡ "ಅಕ್ಕಯ್ಯ ಅಕ್ಕಯ್ಯ ಕಟ್ಲ್‌ನ ಹಿಡ್ಕ. ಕಟ್ಲ್ ತಿರುಗ್ತಾ ಉಟ್ಟು. ಬಾ ಒಮ್ಮೆಂತ" ಕರ್ತ್. ಓಹೋ ತಂಗೆಗ್ ಜಾಸ್ತಿ ಆಬುಡ್ತ್. ಮದ್ಯೆಗೆ ಮುಂದೆ ನಾವಿಬ್ಬರೂ ಕದ್‌ಕದ್ ಏರ್‌ಸ್ತಾ ಇದ್ದೊ. ಏನಾತಿತ್‌ಲೆ. ಇಂದೇನಾತ್ ಇವ್ಳಿಗೆಂತ ಗ್ಯಾನ ಮಾಡಿಕಂಡ್ "ಚಿಮ್ಮಿ ಹಞ ಮಜ್ಜಿಗೆ ಕುಡ್ತಿಯಾಂತ" ಕೇಳ್ತ್. ನಂಗೆಯಂತ ಬೇಡಾಂತ ಹೇಳಿ ಕಣ್

ಮುಚ್ಚಿಕಂಡತ್. ಪುನಃ "ಅಕ್ಕಯ್ಯ ಅಕ್ಕಯ್ಯಾ ನನ್ನ ತಲೆ ಸ್ಪೀಡಾಗಿ ಓಡ್ಚಂತ ಹೇಳ್ತ್" ತಥ್ತ್ತೇರಿ, ಸ್ಪೀಡ್ ಕಂಟ್ರೋಲ್ ಆಕ್ಕೊರೆ ನಿಂಬುಳಿನೆ ಸರಿ. ಒಂದ್ ನಿಂಬುಳಿನ ಕೊಯ್ತ್. ಒಂದ್ ಒಡೆನ ನೆತ್ತಿಗೆ ಉಜ್ಜಿತ್. ಹಂಗೆ ಹಿಂಗೆಲ್ಲಾ ಆಕನ ತಂಗೆಗೆ ನಿದ್ದೆ ಬಾತ್.

ದೀಪ ತುಂಬಿದೊ. ಎಲ್ಲವು ಮಲ್ಗಿ ಗೊರಕೆ ಹೊಡ್ಡೊ. ಸಮ ಇರ್‍ಳ್ ಆಗಿರ್ದು. ತಂಗೆದ್ ಕೂಸು "ಅಮ್ಮಾ.... ಅಮ್ಮಾಂತ" ಕಿರ್‍ಚಿ ಕಿರ್‍ಚಿ ಬೊಬ್ಬೆ ಹಾಕಿಕೆ ಸುರು ಮಾಡ್ತ್. ಅಕ್ಕಂಗೆ ಎಚ್ಚರ ಆತ್. ದೀಪ ಹೊಸಿಕೇಂತ ಬೆಂಕಿ ಪಟ್ಟಕ್ಕೆ ಕೈ ಹಾಕಿತ್. ಅಲ್ಲೆಲ್ಲೂ ಬೆಂಕಿ ಪಟ್ಟ ಇಲ್ಲೆ. ಕೆಲವು ಮನೆಲಿ ಹಂಗೆ. ಯಾವ ವಸ್ತುನೂ ತೆಗ್ದ ಕಡೆ ಮಡ್ಗುದ್ಲೆ. ಶಿಸ್ತು ಇಲ್ಲದೆ ಹಿಂಗೆನೆ. ಹಂಗೆ ಇವರ ಮನೆಲೂ ಆತ್. ಅಕ್ಕ ಅಲ್ಲಿ ಇಲ್ಲಿ ತಬ್‍ರ್‍ಸಿತ್. ಕೈತಾಂಗಿ ಸೀಮೆಣ್ಣೆ ದೀಪ ಬೀತ್. ಕೂಸುದು ಬೊಬ್ಬೆ ಹಂಗೇ ಉಟ್ಟು. ಕಡೆಗೆ ಬೆಂಕಿ ಪಟ್ಟ ಸಿಕ್ತ್. ಹೊತ್ತಿಸಿರೆ ಹೊತ್ತಿದೆಯಾ? ಅದ್ ಶೀತ ಹಿಡ್ದ್ ಕಡ್ಡಿಗೆಲ್ಲಾ ಹಾಳಾದೊ. ಪಟ್ಟದ ಒಂದ್ ಕಡೆದ್ ಮದ್ದೆಲ್ಲಾ ಎದ್ದೋತು. ಇನ್ನೊಂದ್ ಕಡೆಲಿ ಮದ್ ಉಟ್ಟು. ಆ ಭಾಗನ ಅಂಗೈಗೆ ಲಾಯ್ಕ ಉಜ್ಜಿ ಉಜ್ಜಿ ಬಿಸಿ ಮಾಡ್ತ್. ಸಧ್ಯ ಒಂದ್ ಕಡ್ಡಿಗೆ ಜೀವ ಇತ್. ಕಡ್ಡಿ ಹೊತ್ತಿತ್. ದೀಪ ಹೋಸಿತ್. ತಂಗೆಗೆ ಏನಾತೋ ಏನೋ. ಏನಾರ್ ಹೆಚ್‍ಕಮ್ಮಿ ಆದರೆ ಯಂತ ಮಾಡ್ವುಂತ ಹೇಳಿಕಂಡ್ ಅವ್ವು ಮಲಗಿದ ಕಡೆ ಹೋತು. ಅಲ್ಲಿ ನೋಡಿರೆ ಕಥೆ ಬೇರೆ !! ತಂಗೆ ಮಲಗಿದಲ್ಲೆ ಉಟ್ಟು. ಕೂಸು ಮಾತ್ರ ಎದ್‍ಕುದ್ದುಟು. ಕೂಸುನ ಕೆಮಿದ್ ಕೊಂಡೊಳಕ್ಕೆ (ರಿಂಗ್‍ಗೆ) ಉಗುರು ಸಿಕ್ಕಿಕಂಡ್ ಕೊತ್ತಿಮರಿ ನೇತಲಾಡ್ತೆ !! ಇವುಳು ಮೆಲ್ಲ ಕೊತ್ತಿ ಮರಿದ್ ಉಗುರುನ ಕೆಮಿಂದ ಬುಡ್ಸಿದೆ. ಕೂಸುನ ಎತ್ತಿಕಂಡ್ ಸಮಾಧಾನ ಮಾಡ್ತೆ. ಇಷ್ಟೆಲ್ಲಾದರೂ ತಂಗೆಗೆ ಮಾತ್ರ ಗೋಚರೇ ಇಲ್ಲೆ.

ಕೊತ್ತಿಮರಿ ಯಂತಕೆ ಹಾಸಿಗೆಗೆ ಹೋತು? ಯಾಕೇಂತೇಳಿ ಈ ಕೊತ್ತಿ ಮರಿನ ಎಲ್ಲಿಂದೋ ಒಂದಿನ ತಂದೊ. ಅದ್ ಸಣ್ಣಮರಿ ಬೇರೆ. ತಂದ ರಾತ್ರೆ ಹಗ್ಲೂ ಮೀಂ ಮೀಂತ ಮರ್‍ಡ್‍ತಾ ಇರಕನ ಬೇಜಾರಾದ ಈ ಮನೆ ಗೂಡೆ ಆ ಮರಿನ ತನ್ನಹಕ್ಕಲೆ ಮಲಗ್ಸಿಕಂಡತ್. ಹಂಗೆ ಮಲಗಕನ ಆ ಕೊತ್ತಿ ಮರಿ ಇವುಳ ಕೆಮಿನ ಚೀಪಿ ಕಂಡ್ ಮಲಗ್ತಾ ಇತ್. ಈ ಗೂಡೆಗೆ ಆ ಕೊತ್ತಿಮರಿದ್ ಗುರುಗುರಸದ್ ಇಷ್ಟ. ಬಿಸಿ ಗಾಳಿ ಕೆಮಿಗೆ ಬಡೆಕನ ಇವುಳಿಗೆ ನಿದ್ದೆ ಬಾದು. ಆ ಕೊತ್ತಿ ಮರಿಗೆ ಇವುಳ ಕೆಮಿ ಸಿಕ್ಕಿರೆ ಮತ್ತೆನೂ ಬೇಡ. ಹಿಂಗೆ ಅಭ್ಯಾಸ ಮಾಡಿಕಂಡ ಕೊತ್ತಿಮರಿ ಮಾಮೂಲಿ ಮಲಗುವಲ್ಲಿಗೆ ಬಂದ್ ನಂಟತಿ ಕೂಸುಂತ ಗೊತ್ತಿಲ್ಲದೆ ಈ ಕೂಸುನ ಕೆಮಿಗೆ ಬಾಯಿ ಹಾಕಕನ ಈ ಕೂಸು ಹದರೆದೆ ಇರ್ದಾ? ಕೊತ್ತಿಗೂ ಗಾಬರಿ ಆಕನ ಅವ್ವ ಕೊಂಡೊಳಕ್ಕೆ ಉಗುರು ಸೆಕ್ಕಿ ಕಂಡ್ ರಂಪ ರಾಮಾಯಣ ಆಗೋತ್. ಈ "ಡೋಸ್ ಪಾರ್ಟಿಗೆ" ಸಂಗತಿ ಗೊತ್ತಾದ್ ಬೆಳಿಗ್ಗೆ !

ಯಾರೇ ಆಗಲಿ ಕೊತ್ತಿನ ಮಾತ್ರ ಹಾಸಿಗೆಗೆ ಸೇರ್‍ಸಿಕಾಗದ್. ಚಿಗಟ, ಉಣ್ಣೆಗಳ ಕಾಟ ಸುರು ಆದೆ. ಎಲಿ, ಓಂತಿ, ಹಾವು, ಹರಣೆ ಎಂತ ಸಿಕ್ತ್ ಅದರ್ನೆಲ್ಲಾ ತಂದ್ ತಿಂಬೊದು ಹಾಸಿಗೆಲೇ !! ಕಡೆಗೆ ತಿಂದದ್ ಜಾಸ್ತಿ ಆದರೆ ವಾಂತಿ ಮಾಡ್ವೂ ಅಲ್ಲೇ !

ಯಾವುದ್ ಎಲ್ಲಿರಿಕೋ ಅಲ್ಲಿದ್ದರೇ ಒಳ್ಳದಲ್ಲಾ ! ನೀವೇನ್ ಹೇಳಿರೆ?

ಬಿ. ಆರ್. ಜೋಯಪ್ಪ
ಮದೆ

## ಶುಭ ವಿವಾಹಗಳು

ಅವಂದೂರು ಗ್ರಾಮದ ಪಟ್ಟಡ ತಮ್ಮಣ್ಣನವರ ಮಗ **ಶಿವಾನಂದನಿಗೂ** ಮತ್ತು ಊರುಬೈಲು ಚೆಂಬುಗ್ರಾಮದ ಎಕ್ಕಡ್ಕ ಜನಾರ್ಧನನವರ ಪುತ್ರಿ **ಪುಷ್ಪಾವತಿಗೂ** ದಿನಾಂಕ 6-6-1999ರಲ್ಲಿ ವರನ ಸ್ವಗೃಹದಲ್ಲಿ ವಿಜೃಂಭಣೆಯಿಂದ ವಿವಾಹ ನಡೆಯಿತು.

ಹೊಸ ಪಟ್ಟಣ ಗ್ರಾಮದ ಕಳಂಜನ ಬಾಲಕೃಷ್ಣನವರ ಪುತ್ರಿ **ಸುಶೀಲಳಿಗೂ** ಮತ್ತು ಮದೆ ಗ್ರಾಮದ ಪಳಂಗೋಟು ದಿ. ಚಿಟ್ಟಿಯಪ್ಪನವರ ಪುತ್ರ **ಡಾಲುವಿಗೂ** ದಿನಾಂಕ 21-6-1999ರಲ್ಲಿ ಮಡಿಕೇರಿಯ ಮೇಲಿನ ಗೌಡ ಸಮಾಜದಲ್ಲಿ ವಿವಾಹ ನಡೆಯಿತು ಎಂದು ತಿಳಿದುಬಂದಿದೆ.

ಮೈಸೂರು ನಿವಾಸಿ ಚೆಟ್ಟಿಮಾಡ ರಘುಪತಿ (ಮಡಿಕೇರಿ ಗೌಡ ಸಮಾಜದ ಮ್ಯಾನೇಜರ್) ಇವರ ಮಗಳು **ಉಷಾಳಿಗೂ** ಮೈಸೂರು ನಿವಾಸಿ ಟೆಲಿ ಮಿಡಿಯದ ಮಾಲೀಕ **ಡಿ. ರಾಜ್‍ಕುಮಾರ್‍ನವರ** ವಿವಾಹವು ಮಡಿಕೇರಿಯ ಕೆಳಗಿನ ಗೌಡ ಕಲ್ಯಾಣಮಂಟಪದಲ್ಲಿ ದಿನಾಂಕ 4-7-1999ರಲ್ಲಿ ವಿಜೃಂಭಣೆಯಿಂದ ನಡೆಯಿತು.

## ನಗೆಹನಿ

ವರ್ಲ್ಡ್‍ಕಪ್ ಸೋತು ನಾಚಿಕೆಯಿಂದ ಭಾರತಕ್ಕೆ ಹಿಂದಿರುಗಿದ ಸಂದರ್ಭ ಸಿಖ್ಖ್ ವೇಷ ಧರಿಸಿಕೊಂಡು ಬಂದ ಅನಿಲ್ ಕುಂಬ್ಳೆಯನ್ನು ಕಂಡು

ಹುಡುಗಿ : ಹಲೋ ಮಿ. ಅನಿಲ್ ಕುಂಬ್ಳೆ ಎಂದಳು.

ಸಿಖ್ಖ್ ವೇಷದ ಅನಿಲ್ ಕುಂಬ್ಳೆ ಗಾಬರಿಯಾಗಿ ಕೂಡಲೇ ಮರೆಮಾಚಿ ಮುಸಲ್ಮಾನನ ವೇಷದಲ್ಲಿ ಸ್ವಲ್ಪ ಸಮಯದ ನಂತರ ಪುನಃ ಬಂದನು.

ಪುನಃ ಅದೇ ಹುಡುಗಿ : ಹಲೋ ಮಿ. ಅನಿಲ್ ಕುಂಬ್ಳೆ ಎಂದಳು.

ಆಶ್ಚರ್ಯದಿಂದ ಅನಿಲ್‍ಕುಂಬ್ಳೆ ತಬ್ಬಿಬ್ಬಾಗಿ ಅವಳನ್ನೇ ಕೇಳಿದ.

ಕಣ್ಣು ತಪ್ಪಿಸಲು ನಾನು ಏನೇ ವೇಷ ಬದಲಾಯಿಸಿದರೂ ನೀನು ಹೇಗೆ ನನ್ನನ್ನು ಕಂಡುಹಿಡಿದೆ? ಕೂಡಲೆ ಆ ಹುಡುಗಿ 'ಅಯ್ಯೊ ಗೊತ್ತಾಗಿಲ್ವ ನಾನು ಕಣೋ ಅಜರುದ್ದೀನ್' ಎಂದ.

ಕಾಸ್ಪಾಡಿ ದೀಪಾ ಮೋನಪ್ಪ
ಬೆಂಗಳೂರು.

# ಾಮೆವ್ವನ ಪರದಾಟ

ಬೋಜಣ್ಣ ಮಿಲಿಟ್ರಿಂದ ವರ್ಷೊಳು ಮೊದುವೆ ಸಮಯಕ್ಕೆ ಯಾಗಿ ರಜೆಲಿ ಬರೊಂವಾ. ಈ ವರ್ಷ ಹುತ್ತೇರಿಗೆ ಪೋಯಿಂತೇಳಿ ತ್. ಬಾಕನ ಮಳೆ ಬ್ಯಾರೆ. ಬಸ್ಸ್ ಹತ್ತಿ ಮನೆ ಹತ್ರ ಬಂದ್ ಳ್ತ್. ಮನೆ ಕಡೆ ಹೋಗೋವು ಯಾರ್‍ಯಾರ್ ಸಿಕ್ಕುವೊತೇಳಿ, ನೋಡಿ, ರಾರ್ ಕಾಣದೆ ಹೋದೊ. ಬಾಕನ ಒಂದು ಟಿ. ವಿ. ಬ್ಯಾರೆ ದುಟ್ಟು. ಎಲ್ಲಾ ಸಾಮಾನ್ ತಲೇಲಿ ಹಣ್ಣ್, ಹೆಗ್ಲಲಿ, ಹಣ್ಣ್ ೊತ್ತ್ ಮನೆಗೆ ಬಂದ್ ಮುಟ್ಟಿಕಾಕನ ಚಾಮೆವ್ವಂಗೆ ಕುಸಿಯೋ ಸಿ. ಪಿಳ್ಳಿ ಬಂದದಲಾ ಓಡಿಹೋಗಿ ಚೊಂಬುಲಿ ನೀರ್ ತಂದ್ ೊಟ್ಟ್ ಅವ್ವ ಸುಖ ದುಃಖ ಎಲ್ಲಾ ಕೇಳಿ ಅಡಿಗೆ ಮನೆಗೆ ಓಡ್ತ್. ೂಸುಗೆ ಹಸಿವೆ ಆಗಿರ್ದುತೇಳಿ, ಅನ್ನದ ಮಡ್ಕೆ ನೋಡಿಕಾಕನ ಅನ್ನ ಲ್ಲಾ ಉಂಡಾವುಟ್ಟು. ಅನ್ನ ಬೇಕರೆ ಮಾಡಿಕಣಕ್ ಈ ಗೈಪ್ ಎಂತ ಾಡ್ದುತೇಳಿ ಗೈಪುನ ಚೆಟ್ಟಿ ನೋಡ್‌ಕಾಕನ ಅದರ್ಲಿ ಮಧ್ಯಾಹ್ನ ಮಾಡ್ದ ಂದು ಹಣ್ಣ್ ಕುಡ್‌ದ್ ಆಂಬರ. ಗೆಂಡೆ ಕೊಯ್ದು ಮಾಡ್ದೊತೇಳಿರೆ ಂಗಡಿ ಮುಚ್ಚಿಟ್ಟು. ರೇಟ್ ಬ್ಯಾರೆ ೨೦ ರೂಪಾಯಿ ಕೇಜಿಗೆ. ಏನ್ ಾಡ್ದುತ ಗ್ಯಾನ ಮಾಡಿ ತಲೆಗೆ ಹೊಕ್ಕದೆ ಆಚೆಮನೆಗೆ ಹೋಗಿ "ಏ ುಕ್ಕಳೆ ಯಾರ್‍ಯಾರ್ ಒಳರಿನೇ? ತೇಳ್ತ್. ಚಾಮೆವ್ವನ ಸ್ವರ ಕೇಳಿ, ಾಣಿಗೂಡೆ ಲಂಗನ ಸೊಂಟಕ್ಕೆ ಸಿಕ್ಕಿಸಿಕಂಡ್ ಬಂದ್ ಎಂತ ಚಾಮೆವ್ವ ಾರಿ ಅರ್ಜೆಂಟ್‌ಲಿ ಒಳ್ರಿತ ಕಂಡದೆ ಎಂತಾತ್‌ತ ಕೇಳ್ತ್. ಅಧಿಕ್ಕೆ ಾಮೆವ್ವ ಅಲ್ಲನೆ ಬೊಜು ಹೈದ ಬಂದುಟು ಉಂಬಕೆ ಗೈಪು ಒಂದು ಇಲ್ಲೆ. ಹಣ್ಣ್ ಗೈಪು ಉಳ್ದ್ ಇದ್ದರೆ ಕೊಡ್‌ತ್ತೇಳ್ತ್. ಅದ್ಕೆ ರಾಣಿ ೈಪು ಮಧ್ಯಾಹ್ನ ಮಾಡ್ದ್ ಇರೋಕು ತೇಳಿ, ಹೊತ್ತಾರೆ ಹನಿ ಗದ್ದೇಲಿ ಕೊಯ್ದ್ಲ ಮೀನ್ ಸಿಕ್ಕಿತ್‌ತೇಳಿ ಗಂಜಿಲಿ ಹಣ್ಣ್ ಗೈಪುನ ತಂದ್ ಕೊಟ್ಟಿತ್, ಅದರ್ನ ತಂದ್ ಬೋಜಣ್ಣಂಗೆ ಉಂಬಕೆ ಕೊಟ್ಟ್ ಅಲ್ಲೆ ಕುದ್ದತ್. ಬೋಜಂಗೆ ಮೀನ್ ಗೈಪು ನೋಡಿ ಭಾರಿ ಕುಸಿ ಆತ್. ಮಿಲಿಟ್ರಿಂದ ಬಂದದಲ್ಲಾ.

ಉಂಬಕೆ ಸುರು ಮಾಡ್ಕನ ಈ ಚಾಮೆವ್ವನು ರಾಮಾಯಣ ಮಾಡ್ತ್. "ಅಲ್ಲವ್ವ, ಅಲ್ಲಿ ಹೆಂಗೆ? ಮಳೆ ಉಟ್ಟಾ, ಊಟ ಸೆರಿ ಸೇರ್‌ದೆಯಾ? ಅಲ್ಲಿ ನಮ್ಮವು ಸನ ಒಳೋನಾ? ನೀನ್ ಹೊರ್‍ಟ್ ಏಸ್ಟ್ ದಿನ ಆತ್? ಮತ್ತೆ ಮೊನ್ನೆ ಸಣ್ಣಮಾವ ಬಂದಿತ್. ಒಂದು ಗೂಡೆ. ನೋಡಿಟು ಗಡ. ಬೋಜಿ ಬಂದ ಮ್ಯಾಲೆ ಒಂದು ಸರ್ತಿ ನೋಡ್ಲಿ, ಸಾಲೊಳಿಗೆ ಕೂಡಿ ಬಂದರೆ ಮೊದುವೆ ಮಾಡಿಕಂಡೆ ಹೋಗಲಿತ ಹೇಳ್ತ್‌ತ್ ಚಾಮೆವ್ವ ಹೇಳ್ದಕ್ಕೆ ಎಲ್ಲಾ ಹೂಂಗುಟ್ಟಿಕಂಡ್ ಉಂಡ್ ಎದ್ದ್ ಹೋತು.

ಬೆಳಿಗ್ಗೆ ಬೋಜಣ್ಣ ಚಾಮೆವ್ವನೊಟ್ಟಿಗೆ "ಅಲ್ಲವಾ..... ಈಗಳು ಗದ್ದೆ ತೋಡುಗಳ್ಲಿ ಮೀನ್ ಉಟ್ಟಾ? ಪೊಡಮನಿ ಹಾಕೊಳ್ರಿಯಾತ ಕೇಳ್ತ್. ಅದ್ಕೆ ಚಾಮೆವ್ವ ಹೇಳ್ತ್. ಅಯ್ಯೋ ಬಾ ಕೂಸು, ನಂಗಂತೂ ಸರಿ ಓಡಾಡಿಕೆ ಬೊತ್ತ್. ಇನ್ನ್ ಪೊಡ ಹಾಕಿಕೊಡೋವು ಯಾರ್? ಆ ದಿಕ್ಕನೊಟ್ಟಿಗೆ ಹೇಳಿ ಹೇಳಿ ಸಾಕಾತ್. ಒಂದು ಪೊಡ ಮಾಡಿ ಕೊಡುನೆ. ಈ ಮಳೆಗೆ ಮೀನ್‌ಗ ಇಳೆವೊ. ಗದ್ದೆ ಮೀನ್ ತಿಂಬಕೆ ಆಸೆ ಆದೆತ. ಆಃ ಅಂವ ಎಲ್ಲಿ ಬಂದದೇ? ಎಲ್ಲಾ ಸೆನಿಗೆಟ್ಟವು ಸೊಕ್ಕು ಹತ್ತಿ ಹತ್ತಳೊ ಮತ್ತೆ ಮುಂದೆ ನಂಗೆ ಮೀನ್‌ಗ ಎಲ್ಲಿ ಒಳೋ? ಈ ಸುಡ್‌ಗಾಡ್ ಕಂಪೆನಿ ಗೊಬ್ಬರಗಳಿಂದ ಆಗಿ ಮೀನ್ ಇಲ್ಲೆ ಒಂದು ಸುಡ್ದು ಇಲ್ಲೆತ ಹೇಳ್ತ್.

ಈ ಬೋಜಣ್ಣಂಗೆ ಮೀನ್ ಹೆಂಗಾರ್ ಮಾಡಿ ತಿನ್ನೋಕುಂತಾ ತುಂಬಾ ಗ್ಯಾನ ಮಾಡಿಕಂಡ್ ಚಾಮೆವ್ವಂಗೆ ಈಗ ಬನ್ನೆವ್ವಾತ ಹೇಳಿ ದಿಕ್ಕನ ಮನೆ ಕಡೆ ಹೋತ್. ಇಂವನ ಕಾಂಬಕನ ದಿಕ್ಕ "ಓ ಎಟ್ಯಾಳ್, ಏಪೊ ಬತ್ತ್‌ನಾ? ಹಂಗೆ ಹಿಂಗೆತ ಪಟ್ಟಾಂಗ ಸುರು ಮಾಡ್ತ್. ಅದಿಕೆ ಬೋಜಣ್ಣ ಅದೆಲ್ಲಾ ಸೆರಿ, ನೀನ್ ಒಂದ್ ಪೊಡಮಾಡಿಕೊಡ್. ವಾಟೆ ಪಡಲಿ ವಾಟೆ ಬೇಕಷ್ಟು ಉಟ್ಟು. ಆಕಿಲ್ಲೆತ ಹೇಳ್‌ಬ್ಯಾಡ. ದಿಕ್ಕ ಅದಿಕ್ಕೆ ಹೇಳ್ತ್. ಓ ಅಯಿಕ್ ದಾನೆ, ಇನಿಯೇ ಸುರ್ ಮಾಳ್ಪೆತ ಹೇಳ್ತ್. ಇಬ್ಬರು ಒಂದ್ ವಾಟೆ ಕಡ್ದೊ. ವಾಟೆಗಳ ಕಟ್ಟಿ, ಗದ್ದೆ ಪುಣೆಲಿ ಮಡ್ಗಿದ ದಿಕ್ಕ ಎಂತೊ ಗ್ಯಾನ ಮಾಡಿ "ಎಟ್ಯಾಳೇ ಒಂಜಿ ಇರುವೊ ರೂಪಾಯಿ ಕೊರ್‍ಲೆ ಏನ್ ಇತ್ತೆ ಬರ್‍ಪೆತ ಬೋಜಂಣ್ಣಗೆ ಪಾಲೀಸ್ ಮಾಡಿ ಕಾಸ್ ಚೊಟ್ಟಿಕ್ಕಂಡ್ ಬೈಲ್‌ಲಿ ಓಡ್ತ್. ಈ ದಿಕ್ಕ ಎಲ್ಲಿಗೆ ಹೋದುತ ಗ್ಯಾನ ಮಾಡಿಕ್ಕಂಡ್ ಬೋಜಣ್ಣ ಅಂವ ಬಾಕೆಮುಟ್ಟ ಅಲ್ಲೆ ನಿತ್ತತ್. ಅಂವ ಬಾಕನ ಅಂವನ ನೋಡಿ ಬೋಜಂಣಗೆ ಗೊತ್ತಾತ್. ಇಂವ ಹಣ್ಣ್ ಏರ್ಸಿ ಬಂದುಟುತ. ಅಂತು ಒಂದು ಹೇಳದೆ ಸುಮ್ಮನೆ ಅಂವ ವಾಟೆ ಹೊತ್ತ್‌ಕಂಡ್ ತಡ್ರಿಸಿಕ್ಕಂಡ್ ಹೋದೋರ್‍ನೊ ನೋಡ್ತಾ ನಿತ್ತತ್. ಎಂತಾ ಮಾಡ್ದು? ಹೆಂಗಾರ್ ಮೀನ್ ತಿನ್ನಕಲಾ. ಹಂಗೂ ಹಿಂಗೂ ಪೊಡ ಮಾಡಿ ಗದ್ದೆ ಏರಿನ ಎಲ್ಲಾ ಕಡ್ದ್ ತೋಡಿಗೆ ನೀರ್ ಬುಟ್ಟು ಕಟ್ಟೆ ಕಟ್ಟಿ ಪೊಡ ಹಾಕಿದೊ. ಮನೆಗೆ ಹೋಗಿ ಈ ದಿಕ್ಕ ಪುನಃ ಅತ್ತ್ ಎಟ್ಯಾಳೇ, ಮಿಂಟ್ರಿತವು ಇತ್ತ್‌ಂಟಾ ಪನೀತ್ ಕೊರ್‍ಲೆ ತೇಳಿ ಅಂವನ ಹಿಂದೆ ಮುಂದೆ ತಿರ್ಗಿಕೆ ಸುರು ಮಾಡ್ತ್. ಇಂವ ಇನ್ನ್ ಸುಮ್ಮನಿರ್‍ಕಿಲೆತೇಳಿ ಹನಿ ಬಗ್ಗ್‌ಸಿಕೊಟ್ಟತ್. ಅದರ್ನ ಹಿಗ್ಗಿ ದಿಕ್ಕ ಮನೆಕಡೆಗೋತ್.

ಸ್ವಲ್ಪ ಹೊತ್ತ್‌ಗೆ ಮಳೆ ಬಾಕೆ ಸುರಾತ್. ಬೋಜಣ್ಣಂಗೆ ತಂದ ಟಿ. ವಿ.ನ ಗ್ಯಾನಾತ್. ಈ ಮಳೆಗೆ ಎಂತ ಮಾಡಿಕೊ ಬೊತ್ತ್‌ತೇಳಿ ಅಲ್ಲಿ ಇಲ್ಲಿದ್ದ ವಯರ್ ಸಲಿಗೆ ಎಲ್ಲಾ ಸೇರ್‍ಸಿ ಸುರುಟಿ ಹೆಂಗೆಲ್ಲಾ ಮಾಡಿ ಟಿ. ವಿ. ಸೆಟ್ಟ್ ಮಾಡ್ತ್. ಅಸ್ಪೊತ್ತಿಗೆ ಚಾಮೆವ್ವ ಬರೋಕಾ!........ ಬೋಜಣ್ಣನೊಟ್ಟಿಗೆ ಕೇಳ್ತ್. ಅದೆಂತನೆ ಒಂದ್ ಪೆಟ್ಟಿಗೆ? ಅದ್‌ಕ್ಕೆ ಬೋಜಣ್ಣ ಅದ್ ಪೆಟ್ಟಿಗೆ ಅಲ್ಲವ್ವ. ಟಿ. ವಿ. ನೀ ಹಣ್ಣ್‌ಸುಮ್ಮನೀರ್. ಈಗ ನೋಡ್ ಅದ್ರುರ್ಲಿ ಪಿಕ್ಚರ್ ಕಂಡದೆ ತೇಳಿ ಟಿ. ವಿ. ಆನ್ ಮಾಡ್ತ್. ಅಂದ್ ಸೆನಿಸೆನಿತ ಟಿ. ವೀಲಿ ಕ್ರಿಕೇಟ್ ಆಟ ಬ್ಯಾರೆ. ಆಟ ಸುರಾವುಟ್ಟು. ಚಾಮೆವ್ವ ನೋಡಿ, ಅಲ್ಲನೆ ಅವು ಅದರೊಳಗೆ ಹೆಂಗೆ ಆಡ್ದುತ. ಅವು ಹೆಂಗೆ ಬಂದೋ? ತೇಳಿ ಸ್ವಲ್ಪ ಹೊತ್ತು ನೋಡಿಕಂಡೆ ನಿತ್ತಿತ್. ಅವ್ವಂಗೆ ಒಂದು ಅರ್ಥ ಆತಿಲ್ಲೆ. ಪುನಃಹ ಅಲ್ಲನೆ ಅದೆಂತ ಸಾವುನ ಆಟ. ಆಚೇಲಿ ಒಬ್ಬ ಈಚೆಲಿ ಒಬ್ಬ. ಮೂರ್ ತೀನಾ ಊರಿ ಕೈಲಿ ಬಡ್ಗೆ ಹಿಡ್ಕಂಡ್ ಕಲ್ಲ್ ಹೊಡೆಕಾಕನ ದೊಣ್ಣೆಲಿ ಬಡ್ದ್ ಹುಚ್ಚ್‌ನಾಯಿ ಕಚ್ಚಿಕೆ ಬೆರ್‍ಸಿಕ್ಕಂಡ್ ಬಂದವರಂಗೆ ಓಡುವೆತೇಳ್‌ಕಾಕನ ಬೋಜಣ್ಣಂಗೆ ಸಿಟ್ಟ್ ಬಂದ್ ಬೊತ್ತು. ಇಸ್ಸ್!!!ತ್ತೇಳಿ ಹೋಗಿ ಟಿ.ವಿ.ನ ನಿಲ್ಸಿಸಿತ್. ಅದ್ಕೆ ಚಾಮೆವ್ವ, ಅಲ್ಲವಾ ಅವು ಎಲ್ಲಿ ಹೋಬುಟ್ಟೊತ ಹೇಳ್‌ಕಾಕನ



# ನಗೆಹನಿ

ಮನೇಲಿ ಊದ್‌ಕಡ್ಡಿ ಹಚ್ಚಿ ಕೆಲ್‌ಸಕೆ ಹೊರ್‌ಟ ತಿಮ್ಮ ಅದನ್ನ ನೆನ್‌ಸಿಕಂಡ್ ಓಡೋಡಿ ಮನೆಗೆ ಬಾತ್

ತಿಮ್ಮಿ : ಯಾಕೆ ಬಂದರೀತ ಗಂಡನ ಕೇಳ್‌ತ್

ತಿಮ್ಮ : ನಾನ್ ಊದ್‌ಕಡ್ಡಿ ಕೆಡ್‌ಸಿಕೆ ಮರ್‌ತ್‌ಹೋದೆ ಅದ್‌ಕೆ ಕೆಡ್‌ಸಿಕೆ ವಾಪಾಸ್ ಬಂದೆ.

ತಿಮ್ಮಿ : ಅಯ್ಯೋ ಅಲ್ಲಿಂದ ಚಪ್ಪಲ್ ಸವ್‌ಸಿಕಂಡ್ ಬಂದ್ ಬುಟ್ರಿಯಲ

ತಿಮ್ಮ : ಹೋಗ್‌ನೇ ನಾನ್ ಚಪ್ಪಲ್‌ನ ಕೈಯಿಲಿ ಹಿಡ್‌ಕಂಡ್ ಓಡಿಬಂದೆ.

ಗೋಪಿ : ಗಂಡಂದರ್‌ನ ಯಾಗೋಳು ಅಯ್ಯೋ ಪಾಪ ತ ಯಾಕೆ ಹೇಳ್ದು?

ಕಿಟ್ಟಿ : ಶೂರಾಧಿಶೂರನಾದ ಅಂವ ಯುದ್ಧಲಿ ಎಷ್ಟೇ ಪರಾಕ್ರಮ ತೋರ್ಸಿರು ಹೆಣ್ಣ್‌ನ ಮುಂದೆ ಮಾತ್ರ ಇಲಿ ಆಗಿಬುಟ್ಟದೆ ಅದ್ಕೆ

**ಅಚ್ಚಲ್ಪಾಡಿ ಬೀನ ಗೋಪಾಲ, ಗದ್ದಿಗೆ, ಮಡಿಕೇರಿ.**

ಒಂದು ಅಜ್ಜಂಗೆ ಮೂರು ಪಿಳ್ಳಿಕ ಇದ್ದೊ. ಆ ಪಿಳ್ಳಿಗಳಿಗೆ ತುಂಬಾ ಕೆಲಸ. ಮೈ ತೊರ್‍ಸಿ ಕಣಿಕೆ ಪುರುಸೊತ್ತಿಲ್ಲೆ. ಒಂದು ದಿನ ಅಜ್ಜ ಪೇಟೆಗೆ ಹೋಗಿ ಸುರಾಲ್ (ಪ್ಯಾಂಟ್) ತಕಂಡ್ ಬಾತ್. ಅದ್ ನೋಡ್ಕನ ತುಂಬಾ ಉದ್ದ ಇತ್ತ್. ಅಜ್ಜ ಪಿಳ್ಳಿಕಳಿಗೆ ಹೇಳ್ತ್. ನಿಮಗೆ ಪುರೊಸೊತ್ತು ಇರ್ಕನ ಸುರಾಲ್ ಸ್ವಲ್ಪ ಕತ್ತ್‌ರ್ಸಿ ಹೊಲ್ದ್ ಇಸಿತ. ಆ ಪಿಳ್ಳಿಕ ಅವ್ಕೆ ಟೈಮ್ ಇರ್ಕನ ಹೊಲ್ದ್ ಇಸಿದೊ. ಕಡೆಗೆ ಅಜ್ಜ ಹಾಕಿ ನೋಡ್ದೆ. ಅದ್ ಪ್ಯಾಂಟ್ ಹೋಗಿ ಚಡ್ಡಿ ಆಗಿ ಹೋಗಿತ್ತ್. ಅಜ್ಜಂಗೆ ಮಾತ್ರ ತುಂಬಾ ಬೇಜಾರ ಆತ್.

**ಅಯ್ಯಂಡ್ರ ಪುಷ್ಪ ಯಾದವ, ಕುಶಾಲನಗರ**

ಲವ ಬೆಳಿಗ್ಗೆ ಎದ್ದ್ ಕನ್ನಡ ಪುಸ್ತಕ ಓದಿಕಂಡಿತ್ತ್. ಆಗ "ಕೈ ಕೆಸರಾದರೆ ಬಾಯಿ ಮೊಸರ್" ಗಾದೆ ಓದ್‌ಕನ ಅಪ್ಪ ಮಂಜನ ಬಾನೆ ಇಲ್ಲಿ ತೇಳಿ ಕರ್ದ್ ಕೈ ಕೆಸರಾದರೆ ಬಾಯಿ ಮೊಸರು ಹೇಳ್ರೆ ಎಂತತ ಕೇಳ್ತ್. ಆಗ ಲವ ಏನ್ ಹೇಳ್ತ್ ಗೊತ್ತಾ. ನಮ್ಮ ದೊಡ್ಡ ಗದ್ದೆ ಕಂಪ ಮೊಸರ್‌ನಂಗೆ ಉಟ್ಟಲಾ ಅದ್ಕೆ ಕೈ ಹಾಕಿರೆ ಕೆಸರಾದೆ ತೇಳ್ತ್.

**ಕಡ್ಲೇರ ಸಂಜಿ ಮುಂದಪ್ಪ, ಕುಯ್ಯಂಗೇರಿ ಗ್ರಾಮ**

# ಕನಸು

ರಭಸದೀ ಬರುತ್ತಿದ್ದವಳಿಗೆ
ಹೊಡೆದನೊಬ್ಬ ಡಿಕ್ಕಿ
ನೋಡಿದೆ ನಾ ಅವನನ್ನೆ ಇಣುಕಿ
ಮಾಡಿದನು ತರತರದ ಶೋಕಿ
ಅವನ ಹೆಸರಾಗಿತ್ತು ಪ್ರಿಯಾ ವಿಕ್ಕಿ
ಅವನೆಡೆ ಹರಿಯಿತು ನನ್ನ ಪ್ರೀತಿ ಉಕ್ಕಿ
ವರ್ಣಿಸಿದೆ ನನ್ನ ಪ್ರಾಣದ ಹಕ್ಕಿ
ಅಷ್ಟರಲ್ಲಿ ಎಚರಿಸಿತು ನನ್ನ ಮಿಕ್ಕಿ
ಬೆಳಕನ್ನು ಕಾಣಿಸುತಿತ್ತು ಪಕ್ಕದ ಕಿಟಕಿ
ನನದೇ ಎನ್ನೋಣವೆ ಈ ಬ್ಯಾಡ್ ಲಕ್ಕಿ

**ಅಣ್ಣೆ ಚೀರಾ ಭಾ**
**ಮಕ್ಕಂದೂರು ಗ್ರಾ**

# ಗಿಣಿ

ಹಸಿರು ಮೈಯ ಕೆಂಪು ಕೊಕ್ಕಿನ
ಮುದ್ದಿನ ಗಿಣಿಯೇ ಬಾರೋ ಬಳಿಗೆ
ಚಿನ್ನದ ಗೂಡಲಿ ನಿನ್ನನ್ನು ಕೂರಿಸಿ
ಹಣ್ಣನ್ನು ಕೊಡುವೆ ಪ್ರತಿ ಗಳಿಗೆ
ಅಮ್ಮನು ಮಾಡಿದ ಶುಚಿ ರುಚಿ ತಿಂಡಿಯ
ನಿನಗೂ ನಾನು ನೀಡುವೆನು
ಟೀಚರು ಕಲಿಸಿದ ಪಾಠಗಳನ್ನು
ನಿನಗೂ ನಾನು ಕಲಿಸುವೆನು
ಬಾರೋ ಬೇಗ ಮುದ್ದಿನ ಗಿಣಿಯೆ
ಹಾರುತ ನನ್ನಯ ಬಳಿ ಬಾರೋ

**ಕೆ. ಎ. ಶಿವಪ್ಪ, ಗಾಳಿಬೀಡ**

ಬೋಜಣ್ಣ ಹಲ್ಲ್ ಕಚ್ಚಿಕ್ಕಂಡ್ ಒಂದ್ ಸರ್ತಿ ನೀ ಹೋಗಿ ಒಳಗೆ ಕಿಚ್ಚಿಸೆರಿ ಮಾಡ್ಬುಟ್ಟ್ ಬಾತಹೇಳ್ತ್. ಅಂತೂ ಈ ಚಾಮೆವ್ವ ಸುಮ್ಮನಿರೊಕಾ? ಮೆಲ್ಲೆ ಅಲ್ಲಾ ಅವು ಇತ್ತ ಹೊರಗೆ ಹೋದುನಾ ಕಂಡತ್ಲೆ ಅದ್ಕೆ ಕೇಳ್ದನೆ ತೇಳ್‌ಕಾಕನ ಬೋಜಣ್ಣ ಈ ಅಜ್ಜಿನೊಟ್ಟಿಗೆ ಇನ್ನ್ ಮಾತಾಡ್ರೆ ಹುಚ್ಚು ಹಿಡಿಯದು ಗ್ಯಾರಂಟಿತೇಳಿ, ಕ್ವಾಂಬರೆಗೆ ಹೋಗಿ ಮುಸ್ಕು ಹೊದ್ದ್ ಮಲ್ಗಿತ್. ಅಷ್ಟೊತ್ತಿಗೆ ಹನಿ ಮಳೆ ಹನ್ಕಿಕೆ ಸುರಾಗಿ ಜೋರ್ ಜೋರಾಗಿ ಬೀಳಿಕೆ ಸುರಾಕನ ಬೋಜಣ್ಣಂಗೆ ಈ ಟಿ.ವಿ. ಗ್ಯಾನ ಬುಟ್ಟ್ ತೋಡಿಗೆ ಹಾಕಿದ ಪೊಡ ಗ್ಯಾನಾತ್. ಕತ್ತಲೆಗೆ ಉಂಡ್‌ಕಂಡ್ ಕುದ್ದಿರ್‌ಕಾಕನ ಚಾಮೆವ್ವ, ಮಳೆ ಸರಿ ಹೊಡಿತಾ ಉಟ್ಟು, ನಾಳೆ ಬೆಳಿಗ್ಗೆ ಮೀನ್‌ಗ ಇಳೆವೊತ ಹೇಳ್ತ್. ಬೋಜು ರಾತ್ರಿ ಮೀನ್‌ದೆ ಗ್ಯಾನ್ ಮಾಡಿಕಂಡ್ ಹಂಗೆ ನಿದ್ರೆ ಮಾಡ್ತ್.

ಬೆಳಿಗ್ಗೆ ಎದ್ದವಂನೆ ಚಾಮೆವ್ವನೊಟ್ಟಿಗೆ, ಅವ್ವಾ ಬೆಳಿಗ್ಗೆ ರೊಟ್ಟಿಗೆ ಮೀನ್ ಗೈಪು ಮಾಡ್ನೊ ನಾ ಹೋಗಿ ಬನ್ನೆತೇಳಿ ಗದ್ದೆಗೆ ಓಡ್ತ್. ಇತ್ತ ಚಾಮೆವ್ವ ಕಡೆವಕಲ್ಲಿಗೆ ಸಾಮಾನ್ ಎಲ್ಲಾ ಹಾಕಿ ಕಡಿಯಕೆ ಸುರ್ ಮಾಡ್ತ್. ಬೋಜಣ್ಣ ಗದ್ದೆ ಪುಣಿಲೆ ಬಾಕನ ಇವಂಗೆ ತೋಡ್‌ದ್ ನೀರ್ ನೋಡಿ ಡೌಟು ಬಾತ್. ಮಳೆಗೆ ನೀರ್ ತುಂಬಾ ಇರಕ್ಕಾಗಿತ್ತಲ್ಲ, ಇಲ್ಲಿ ನೋಡ್ರೆ ನೀರ್ ಹಿಂದೆ ಹರ್ದ್‌ಂಗೆ ಹರಿ ಉಟ್ಟುತ್ತೇಳಿ, ಕಟ್ಟೆ ಹಾಕಿದ್ದಲ್ಲಿ ಬಂದ್ ನೋಡಿಕಾಕನ ಅಲ್ಲಿ ಎಂ ಉಟ್ಟು. ರಾತ್ರಿ ಬಂದ ಮಳೆಂದ ಹಾಕಿದ ಕಟ್ಟೆ ಒಡ್ದ್‌ಹೋಗಿ ಒಟ್ಟಿ ಪೊಡನು ಸನ ಕೊಚ್ಚಿಕಂಡ್ ಹೊವುಟು. ಇದರ್ನ ನೋಡಿ ಇವಂ ಹೊಟ್ಟೆ ಎಲ್ಲಾ ಮಗ್ಗಿಕಂಡ್ ಬಾತ್. ಕಟ್ಟೆ ಹಾಕಿದ ದಿಕ್ಕಂಗೆ ಎರ್ ಬಿಗಿಯಕುತ್ತೇಳಿ ಅಂವನ ಹಟ್ಟಿಗೆಗೆ ಹೋಗಿ ದಿಕ್ಕನ ಪಾಲ್ಚಿನೊಟ್ಟಿಗೆ ದಿಕ್ಕ ಎಲ್ಲಿತ ಕೇಳ್‌ಕಾಕನ, ಅವ್ವು ಆರ್ ಕ್ವಾಡೆ ಒಂತೆ ಜ್ಯಾಸ್ತಿ ಪರ್ ನಾಣಲಾ ಲಕ್ಕ್‌ತಿಜಿರ್‌ತೇಳ್ತ್. ಬೋಜಣ್ಣಂಗೆ ಎಂತ ಹೇಳಿಕ ದಾರಿಕಾಣದೆ ಮುಖ ಪೂಜಿಕಂಡ್ ಮನೆಗೆ ಬಾಕನ ಚಾಮೆವ್ವ ಮಸಾ ಎಲ್ಲಾ ರೆಡಿ ಮಾಡಿ ಕಡ್ದ್, ರೊಟ್ಟಿ ಮಾಡಿ, ಮೀನ್ ಈ ತಕಬಾದುತೇಳಿ ಕುದ್ದುಟ್ಟ್. ಬೋಜಣ್ಣ ಬರೀ ಕೈಲಿ ಬಾದು ನೋಡಿ ಮೀನ್ ಎಲ್ಲಿತ ಕೇಳ್‌ಕಾಕನ ಇಂವ ಎಂತ ಉತ್ತರ ಕೊಡ್ದು. ನೀವೇ ಗ್ಯಾನ ಮಾಡಿ, ಹೆಂಗೆ ಆಗಿರಿಕಿಲೆ ಈ ಚಾಮೆವ್ವಂಗೆ!!!

ಬರಹ : ಪೂಜಾರಿಮನೆ ಮಾಚಯ್ಯ ಅಮರೇಶ್
ಭಾರತದ ಗಡಿ ಭದ್ರತ ಪಡೆ, ಅಸ್ಸಾಂ.

## ..ದಿಕ ಧರ್ಮದಂತೆ (ಹಿಂದೂ ಧರ್ಮ) ದೇವರ ಕಲ್ಪನೆ ಹೀಗಿದೆ :




**ದೇವರ ಅಂಶದ ದೇವತೆಗಳು :** ಅಗ್ನಿ, ವಾಯು, ಕುಬೇರ, ವರುಣ, ಗಂಗಾದೇವಿ, ದೇವೇಂದ್ರ ಹಾಗೂ ಇತರ ಹಲವಾರು ದೈವ ಸಂಭೂತರು.

ವೈದಿಕ ಧರ್ಮ (ಹಿಂದೂ ಧರ್ಮ)ದ ಜನರು ದೇವರನ್ನು, ಅವರ ಅವತಾರಗಳನ್ನು ಸ್ತುತಿಸುತ್ತಾರೆ, ಪೂಜಿಸುತ್ತಾರೆ. ಮೂರ್ತಿ ರೂಪದಲ್ಲಿ ..ಜಿಸುತ್ತಾರೆ. ಅದು ಆದಿ ದೇವನಿಗೆ ಸಲ್ಲುತ್ತದೆ. ಜಗತ್ತಿಗೆಲ್ಲ ಒಬ್ಬನೇ ಆದಿ ದೇವನೆಂದು ಹಿಂದುಗಳು ತಿಳಿದಿದ್ದಾರೆ. ಭಕ್ತರು ತಮ್ಮ ಇಷ್ಟದೇವತೆಯ ..ಟವನ್ನು ಇತರ ದೇವತೆಗಳ ಪಟದ ಮಧ್ಯೆ ಇರಿಸಿ ಅಂತಿಮವಾಗಿ ತಮ್ಮ ಇಷ್ಟ ದೇವತೆಯನ್ನು ಪೂಜಿಸಿದರೆ, ಆ ರೂಪದಲ್ಲೇ ದೇವರು ಅಭಯ ..ಡುತ್ತಾನೆ. ಹಿಂದೂ ಸಮಾಜವು ಜಗತ್ತಿನ ಪ್ರಾಚೀನ ಸುಸಂಸ್ಕೃತ ಸಮಾಜವು, ಸ್ವಧರ್ಮದಲ್ಲಿದ್ದು, ಸತ್ಕರ್ಮನಿರತರಾದರೆ ಅವರಿಗೆ ಸ್ವರ್ಗ, ..ೋಕ್ಷ ಪದವಿಗಳು ದೊರೆಯುತ್ತದೆ. ಹಿಂದೂಗಳು ಮತಾಂತರವಾಗಬಾರದು. ಅಂತಹವರಿಗೆ ದೋಷವಿದೆ.

**ಹಿಂದೂಗಳ ಮೂಲಭಾಷೆ :** ದೇವ ಭಾಷೆಯೆನಿಸಿದ ಸಂಸ್ಕೃತ (ಪ್ರಾಕೃತ ಭಾಷೆಯ ಮೊದಲ ಶಿಶು)

**ಪವಿತ್ರ ಗ್ರಂಥಗಳು :** ವೇದಗಳು, (ವ್ಯಾಸರಚಿತ) ಉಪನಿಷತ್ತುಗಳ ಹದಿನೆಂಟು ಪುರಾಣಗಳು, ಭಗವದ್ಗೀತೆ, ದೇವಿ ಮಹಾತ್ಮೆ ಇತ್ಯಾದಿ

**ಎಲ್ಲರೂ ಓದುವ ಪವಿತ್ರಗ್ರಂಥ :** ಶ್ರೀಮದ್ ಭಗವದ್ಗೀತಾ (ಎಲ್ಲಾ ಭಾಷೆಗಳಲ್ಲೂ ಲಭ್ಯ)

**ಧರ್ಮರಕ್ಷಕರು :** ಶ್ರೀಕೃಷ್ಣ, ಶಂಕರಾಚಾರ್ಯರು, ಮಧ್ವಾಚಾರ್ಯರು, ರಾಮಾನುಜಾಚಾರ್ಯರು, ಸ್ವಾಮಿ ವಿವೇಕಾನಂದರು.

**ಹಿಂದೂಗಳ ಕರ್ತವ್ಯಗಳು :**

1. ದಿನಕ್ಕೆರಡು ಬಾರಿ ಕೆಲವು ನಿಮಿಷ ಮುಂಜಾನೆ ಮತ್ತು ರಾತ್ರಿ ದೇವರನ್ನು ಪ್ರಾರ್ಥನೆ ಮಾಡುವುದು (ಮನೆಯಲ್ಲಿ)
2. ಚಿಕ್ಕಂದಿನಲ್ಲಿ ಸಂಸ್ಕೃತ ಭಾಷೆಯನ್ನು ಕಲಿಯುವುದು.
3. ಧಾರ್ಮಿಕ ಗ್ರಂಥಗಳನ್ನು ಓದಿ, ಸ್ವಧರ್ಮದ ಶ್ರೇಷ್ಠತೆಯನ್ನು ಅರಿತುಕೊಳ್ಳುವುದು.
4. ದೇವಾಲಯಗಳಿಗೆ ಆಗಾಗ ಹೋಗುತ್ತಿರುವುದು.
5. ಭಗವದ್ಗೀತೆಯ ನಿತ್ಯ ಪಠನ ಒಂದೆರಡು ಶ್ಲೋಕವನ್ನಾದರೂ ಓದುವುದು.
6. ಕಿರಿಯರಿಗೆ ರಾಮಾಯಣ, ಮಹಾಭಾರತ, ಭಾಗವತ ಕತೆಗಳನ್ನು ರಜೆಯಲ್ಲಿ ಹೇಳುವುದು.
7. ದೇಗುಲಗಳಲ್ಲಿ ಆಗಾಗ ಧಾರ್ಮಿಕ ಪ್ರವಚನವಾಗುವಂತೆ, ಆಡಳಿತ ಮಂಡಳಿಗೆ ತಿಳಿಸುವುದು.
8. ಮನೆಗಳಲ್ಲಿ ಕೆಲವು ವರ್ಷಗಳಿಗೊಮ್ಮೆ ಗಣಹೋಮ, ಸತ್ಯನಾರಾಯಣ ಪೂಜೆ ಮುಂತಾದ ಪೂಜೆಗಳನ್ನು ಮಾಡಿಸುವುದು.
9. ವೇದಗಳ ಉಪನಿಷತ್ತುಗಳ ಪುಸ್ತಕಗಳನ್ನು ಓದಿ ತಿಳಿದುಕೊಳ್ಳುವುದು. ಸ್ವಧರ್ಮದ ಹಿರಿಮೆಯನ್ನು ತಿಳಿದುಕೊಳ್ಳುವುದು.

**ಯು. ಗಂಗಾಧರಗೌಡ (ವಾಣಿ ಕುಮಾರ್)**

**ಮಂಡೆ ಕೋಲು, ಸುಳ್ಯ**

# ಗೌಡ ಮಹಿಳಾ ಒಕ್ಕೂಟದ ಪ್ರಬಂಧ ಸ್ಪರ್ಧೆಯಲ್ಲಿ ದ್ವಿತೀಯ ಬಹುಮಾನ ಪಡೆ

## ಲೇಖನ : ಗೌಡ ಸಂಸ್ಕೃತಿ : ಅಂದು, ಇಂದು, ಮುಂದೆ.



ಶ್ರೀ ಬೈತಡ್ಕ ಅಯ್ಯಪ್ಪ ಬೆಳ್ಯಪ್ಪ ಪಾಲೂರು ಗ್ರಾಮದ ದಿ. ಬೈತಡ್ಕ ಅಯ್ಯಪ್ಪ ತಂಗಮ್ಮ ದಂಪತಿಗಳ ತೃತೀಯ ಪುತ್ರರಾಗಿ, ಬೆಟ್ಟಗೇರಿಯಲ್ಲಿ ಮಾಧ್ಯಮಿಕ, ನಾಪೋಕ್ಲಿನಲ್ಲಿ ಪ್ರೌಢಶಾಲೆಯ ವಿದ್ಯಾಭ್ಯಾಸವನ್ನು ಮತ್ತು ಕಾಲೇಜಿನ ವಿದ್ಯಾಭ್ಯಾಸವನ್ನು ಮಡಿಕೇರಿಯಲ್ಲಿಯೂ ಮಾಡಿದ್ದಾರೆ.

ಸನ್ 1964ರಲ್ಲಿ ವಾಯುಪಡೆಗೆ ಸೇರ್ಪಡೆ. 1965, 1971 ಎರಡು ಭಾರತ ಪಾಕ್ ಯುದ್ಧಗಳ ಅನುಭವ. ತಾಂತ್ರಿಕ ರಂಗದಲ್ಲಿ ಸಾರ್ಜೆಂಟ್ ಆಗಿ 18 ವರ್ಷಕಾಲ ಸೇವೆ ಸಲ್ಲಿಸಿ, 1982ರಲ್ಲಿ ಸ್ವಇಚ್ಛೆಯಿಂದ ನಿವೃತ್ತಿ ಹೊಂದಿ ಈಗ ಮಡಿಕೇರಿಯ ಜೀವವಿಮಾ ಸಂಸ್ಥೆಯಲ್ಲಿ ಅಧಿಕಾರಿಯಾಗಿ ಕಾರ್ಯನಿರ್ವಹಿಸತ್ತಿದ್ದಾರೆ.

ದೇಶದ ನಾನಾ ಕಡೆ ದುಡಿದು 1986ರಿಂದೀಚೆಗೆ ಕೊಡಗಿನ ಮಡಿಕೇರಿಯಲ್ಲಿ ನೆಲೆ ನಿಂತಿದ್ದಾರೆ. ಜೀವನದಲ್ಲಿ ಶಿಸ್ತನ್ನು ಅಳವಡಿಸಿಕೊಂಡಿರುವ ಇವರು ಕೊಡಗು ಸಂಗಾತಿಗೆ ಆಗಾಗ ಲೇಖನಗಳನ್ನು ಬರೆಯುತ್ತಾ ಈಗಾಗಲೇ ತಮ್ಮನ್ನು ಪರಿಚಯಿಸಿ ಕೊಂಡಿದ್ದಾರೆ. ಇವರಿಗೀಗ 55 ವರ್ಷ ಪ್ರಾಯವಾಗಿ ಉತ್ತಮ ಅನುಭವಶೀಲ ಪ್ರವೃತ್ತಿಯವರಾಗಿದ್ದಾರೆ. 1997ರಲ್ಲಿ ಮಡಿಕೇರಿ ನಗರದಲ್ಲಿ ಮೊದಲ ಬಾರಿ ಹುತ್ರಿ ಆಚರಣೆ ನಡೆಸುವಲ್ಲಿ ಹೆಚ್ಚಿನ ಶ್ರಮ ಪಟ್ಟ ವ್ಯಕ್ತಿಗಳಲ್ಲೊಬ್ಬ ರಾಗಿದ್ದಾರೆ. ಈ ದಂಪತಿಗಳಿಗೆ ಕುಲಗುರು ಶ್ರೀ ವೆಂಕಟರಮಣನ ಕೃಪೆ ಸದಾ ಇರಲೆಂದು ಸಂಗಾತಿ ಹಾರೈಸುತ್ತದೆ.

– ಸಂಪಾದಕಿ

**ಅಂದು :** ಅರೆಗನ್ನಡವೆಂಬ ತಮ್ಮದೇ ಆದ ನಡುಕನ್ನಡಕ್ಕೆ ಹೋಲುವ ಈ ಭಾಷೆಯನ್ನು ಮನೆಮಾತನ್ನಾಗಿ ಬಳಸುವ ಈ ಜನಾಂಗದವರನ್ನು ಕೊಡಗಿನಲ್ಲಿ ಟಿಪ್ಪುಸುಲ್ತಾನನ ಯುದ್ಧದಿಂದಾಗಿ ಹೆಚ್ಚಿನ ಜನಸಂಖ್ಯೆ ನಾಶವಾಗಿಯೂ ಹಾಗೂ ಮತಾಂತರಗೊಳಿಸಿ ಮೈಸೂರು ಸೀಮೆಯ ಶ್ರೀರಂಗಪಟ್ಟಣಕ್ಕೆ ಒಯ್ದನಂತರ, ಈ ಮಣ್ಣಿನಲ್ಲಿ ಅಂದರೆ 1799ರ ನಂತರ 1805ರೊಳಗೆ ಹಾಲೆ
ಅರಸರಾದ ಶ್ರೀ ದೊಡ್ಡ ವೀರರಾಜೇಂದ್ರ ಒಡೆಯರು ಆಗಿನ ವಿಶಾ
ಕೊಡಗಿನೊಳಗಿದ್ದ ಕನ್ನಡ. ಜಿಲ್ಲೆಯ ಸುಳ್ಯ, ಪುತ್ತೂರು ಮ
ಭಂಟ್ವಾಳ ತಾಲೂಕುಗಳಿಂದ ಧೀರರೂ, ಪರಿಶ್ರಮಿಗಳೂ ಆದ
ರೈತ ಜನಾಂಗದವರನ್ನು ಕುಟುಂಬ ಒಂದರ 10-15ರಂತೆ ತನ್ನ ಅಪ್ಪ
ಮೇರೆ ಆಹ್ವಾನಿಸಿ ಬಂಜರು ಬಿದ್ದಿದ್ದ ಈ ಭೂಮಿಯನ್ನು ಕ
ಮಾಡಲು ನಿಲ್ಲಿಸಿ, ಕುಟುಂಬ ಒಂದರ 500-1000 ಭ
ಭೂಮಿಯನ್ನು ಜಮ್ಮ, ಉಂಬಳಿಗಳಾಗಿ ಹಂಚಿಕೊಟ್ಟಿರುವು
ಚರಿತ್ರೆಯ ಪುಠಗಳಿಂದ ತಿಳಿಯುತ್ತದೆ. ಎರಡು ಶತಮಾನಗಳ ಹಿಂ
ಬರುವಾಗ ತಮ್ಮದೇ, ಆದ ಅಲ್ಲಿದ್ದ ಗೌಡ ಸಂಸ್ಕೃತಿ ಅದರಡಿಯ
ಬರುವ ಸರ್ವ ಆಚಾರ ವಿಚಾರ ಸಂಪ್ರದಾಯಗಳು ಒಕ್ಕಲಿ ಗೌಡರೆಂ
ಇನ್ನೊಂದು ಪಂಗಡದವರು ಕೂಡಾ ರಾಜರ ಕಾಲದಲ್ಲಿ ಹೆಚ್ಚಾ
ಹಾಸನ ಜಿಲ್ಲೆಯ ಆಸುಪಾಸು ಪ್ರದೇಶಗಳಿಂದ ಬಂದವರು. ಇವ
ಸಹ ಜಮ್ಮ ಒಡೆಯರಾಗಿದ್ದಾರೆ.

ವಿಜಯನಗರದ ಶ್ರೀ ಕೃಷ್ಣದೇವರಾಯರ ಕಾಲಕ್ಕಿಂ
ಹಿಂದೆಯೇ ಶಿವಾರಾಧಕರಾಗಿದ್ದ ಗೌಡ ಜನಾಂಗದವರು ಅ
ಮತಾಂತರಕ್ಕೊಳಪಡದೆ, ಅಸಂಘಟಿತರಾಗಿ ಚದುರಿದಂತವರಿ
ಶೃಂಗೇರಿ ಗುರುಮಠಾಧಿಪತಿಗಳು ಸಂಘಟಿತ ಜೀವನಾಕ್ರಮಗ
ಮಾರ್ಗದರ್ಶನ ನೀಡಿದರು. ಮುಂದೆ ಹತ್ತು ಕುಟುಂಬ ಹದಿನೆಂ
ಗೋತ್ರಗಳಾಗಿ ವೃದ್ಧಿಯಾಗುತ್ತಾ ಸುಳ್ಯ ಮಗಣೆಗಳ ಆದಿರಾಜರಾಗಿ
ಇಕ್ಕೇರಿ ನಾಯಕರ ಕಾಲದಲ್ಲಿ, ಪುತ್ತೂರು, ಸುಳ್ಯ ಭಂಟ್ವಾ
ತಾಲೂಕುಗಳಲ್ಲಿ ಈ ಗೌಡ ಜನಾಂಗದವರು ಹೆಚ್ಚು ಹೆಚ್ಚಾಗಿ ಬಂದ
ನೆಲೆನಿಂತು ಸಂಘಟಿತ ರೈತಾಪಿ ಕುಟುಂಬದವರಾದರು, ವೀರರಾಜೇಂ
ರಾಜರು ಗುಂಪುಗುಂಪಾಗಿ ಕೊಡಗಿಗೆ ಕರೆತಂದಾಗ 'ಕಟ್ಟೆಮನೆ' ಅವ
ಯಜಮಾನಿಕೆತನದಲ್ಲಿದ್ದ ಹಿಂದೂ ಸಂಸ್ಕೃತಿಯ ಒಂದು ಅಂಗವಾ
ನಮ್ಮ ಸಂಪತ್ಭರಿತ ಗೌಡ ಸಂಸ್ಕೃತಿಯನ್ನು ತಮ್ಮೊಂದಿಗೆ ತಂದದಲ್ಲ
ಮೂಲ ಸಂಸ್ಕೃತಿಗೆ ಅನ್ಯ ಸಂಸ್ಕೃತಿಯ ಹೇರು ಒತ್ತಡಗಳು ಬೀಳದಂ
ರಕ್ಷಿಸಿಕೊಂಡು ಬಂದಿರುವುದು ಒಂದು ಹೆಮ್ಮೆಯ ವಿಚಾರವಾಗಿದೆ
ದೆವ್ವ ಭೂತಾರಾಧನೆಗಳಲ್ಲಿ ಅಂಧ ಕಂದಚಾರಗಳಿದ್ದರೂ ನಿಷ್ಕಳಂ
ಸಾಧು ಸ್ವಭಾವ, ಶ್ರಮಜೀವಿಗಳಾದ ಇವರ ಹೃದಯದಲ್ಲಿ ಭಕ್
ವಿಧೇಯತೆ ಪ್ರೀತಿ ವಾತ್ಸಲ್ಯ, ವಿಶ್ವಾಸ, ದಯೆ ದಾಕ್ಷಿಣ್ಯ ಅನುಕಂ
ಇವುಗಳು ಮನೆ ಮಾಡಿದ್ದುವು. ಹೊರ ಪ್ರಪಂಚದ ಗಂಧಗಾಳಿ ಇಲ್ಲ
ಒಕ್ಕಲು ಯಜಮಾನನ ಆಳ್ವಿಕೆಯಲ್ಲಿ ಸಹಬಾಳ್ವೆಯನ್ನು ನಡೆಸುತ್ತಾ
ಬಂದರು. ಶ್ರಮಜೀವಿಗಳಾಗಿ ತಮ್ಮ ತಮ್ಮ ಭೂಮಿ ಕೃಷಿಯಲ್ಲೆ
ನಿರತರಾದರು. ಗೌಡವೇತರ ಜನಾಂಗದವರೊಂದಿಗೆ ಭೂಮಿಯನ್ನು
ದಯಪಾಲಿಸಿದ ಹಿಂದೂ ರಾಜರ ಅಪ್ಪಣೆಯಂತೆ ನಿಷ್ಠಾವಂ
ಪ್ರಜೆಗಳಾಗಿ ಒಗ್ಗಟ್ಟಿನಿಂದ ಬದುಕುವುದನ್ನು ಕಂಡರು. ಒಕ್ಕಲು ಕಟ್ಟ
ಊರು ಉದ್ಧಾರ ಮಾಡಿದರು. ಒಕ್ಕಲು ಯಜಮಾನ, ಊರುಗೌಡ

## 1998-99ರ ಸಾಲಿನ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ 60% ಕ್ಕಿಂತ ಹೆಚ್ಚು ಅಂಕ ಗಳಿಸಿದ ಗೌಡ ಪ್ರತಿಭೆಗಳು

| | ಗರಿಷ್ಠ | ಗಳಿಸಿದ್ದು | % |
|---|---|---|---|
| ಯತೀನ್ S/o ಅಂಬೆಮನೆ ಗಣೇಶ್, 4ನೇ ಅಡ್ಡ ರಸ್ತೆ, ಕೆಸರೆ 2ನೇ ಹಂತ, ಎನ್. ಆರ್. ಮೊಹಲ್ಲಾ, ಮೈಸೂರು - 7 | 625 | 554 | 88.64 |
| ಗಾಯಿತ್ರಿ D/o ಕಲ್ಲುಮುಟ್ಲು ಲೋಕನಾಥ, C/o ಸಿ. ಕೆ. ಎಸ್. ಬಾಲಿಕಾ ಪ್ರೌಢಶಾಲೆ, ಹಾಸನ | 625 | 521 | 83.36 |
| ಮಂಜುನಾಥ S/o ಮುಕ್ಕಾಟಿರ ಗಣಪತಿ, 16-61(3) ಮಧು ನಿವಾಸ, ಗಾಂಧಿ ನಗರ, ವೀರಾಜಪೇಟೆ | 625 | 513 | 82.08 |
| ಭರತ್ S/o ಉದಿಯನ ವಸಂತ, ನಂ. 35, ಲಕ್ಷ್ಮಮ್ಮ ಲೇಔಟ್ ನಾಗಸೆಟ್ಟಿ ಹಳ್ಳಿ, RMV 2ನೇ ಹಂತ, ಬೆಂಗಳೂರು - 94 | 625 | 498 | 79.68 |
| ನೀಶಾ D/o ಪಟ್ಟಡ ಪ್ರಭಾಕರ, ನಂ. 3, ಸವಿತಾನಿಲಯ 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿ ಪುರಂ, ಮೈಸೂರು - 12 | 625 | 484 | 77.44 |
| ಉತ್ತಯ್ಯ S/o ತೋಟಂಬೈಲು ರಘು, ಶ್ರೀನಿಧಿ, ನೇತಾಜಿ ಬಡಾವಣೆ, ಕುಶಾಲನಗರ | 625 | 475 | 76.00 |
| ವಿದ್ಯಾ D/o ತೆಕ್ಕಡೆ ಗೋಪಾಲ್, ಶ್ರೀವಿದ್ಯಾ, ನಂ. 2, ನರಸಿಂಹಯ್ಯ ರಸ್ತೆ, ಉದಯನಗರ, ಬೆಂಗಳೂರು - 16 | 625 | 452 | 72.32 |

## 1998-99ರ ಸಾಲಿನ ಪಿ. ಯು. ಸಿ. ಪರೀಕ್ಷೆಯಲ್ಲಿ 60% ಕ್ಕಿಂತ ಹೆಚ್ಚು ಅಂಕ ಗಳಿಸಿದ ಗೌಡ ಪ್ರತಿಭೆಗಳು

| | | | | |
|---|---|---|---|---|
| ನಮಿತ D/o ಪಾಡಿಚಿಟ್ಟೀರ ಪೊನ್ನಪ್ಪ, ನಂ. 147/14, ಹೊಸ ಬಡಾವಣೆ, ಮಡಿಕೇರಿ. | ಕಲಾವಿಭಾಗ | 600 | 452 | 71.00 |

## ರಾಮಾಯಣ ಪರೀಕ್ಷೆಯಲ್ಲಿ ಕೊಡಗು ಜಿಲ್ಲೆಗೆ ದ್ವಿತೀಯ



ಎಚ್. ಪಿ. ಜಿತೇಂದ್ರ
S/o ಹೊಸಮನೆ ಪೂವಯ್ಯ

ಭಾರತಿ ಸಂಸ್ಕೃತಿ ಪ್ರಸಾರ ಯೋಜನೆಯನ್ವಯ ಇತ್ತೀಚೆಗೆ ನಡೆದ ರಾಮಾಯಣ ಪರೀಕ್ಷೆಯಲ್ಲಿ ಸುಂಟಿಕೊಪ್ಪದ ಸಂತ ಮೇರಿ ಶಾಲೆಯ ವಿದ್ಯಾರ್ಥಿ ಎಚ್. ಪಿ. ಜಿತೇಂದ್ರ ದ್ವಿತೀಯ ರ್‍ಯಾಂಕ್‌ನ್ನು ಗಳಿಸಿ ಬೆಳ್ಳಿ ಪದಕವನ್ನು ಪಡೆದುಕೊಂಡಿದ್ದಾನೆ. ಇವನು ಚೆಟ್ಟಳ್ಳಿ ಸಮೀಪ ಚೇರಳ ಶ್ರೀಮಂಗಲ ಗ್ರಾಮದ ಹೊಸ ಮನೆ ಪೂವಯ್ಯ ದಂಪತಿಗಳ ಮಗನಾಗಿರುತ್ತಾನೆ. ಇವನಿಗೆ ಕುಲದೇವರು ಉತ್ತಮ ಭವಿಷ್ಯವನ್ನು ನಿರ್ಮಿಸಲು ಸಹಕರಿಸಲಿ ಎಂದು ಕೊಡಗು ಸಂಗಾತಿ ಮನಪೂರ್ವಕವಾಗಿ ಹಾರೈಸುತ್ತದೆ.

– ಸಂಪಾದಕಿ



ಶ್ರೀಯುತ ಯಾಲದಾಳು ಕೇಶವಾನಂದ, ವಿಶಾಲಾಕ್ಷಿ ದಂಪತಿಗಳು ತಮ್ಮ ಮಗ **ಚಂದನ್** ತಾರೀಖು 12-6-1999ರಲ್ಲಿ ಭಾರತೀಯ ಭೂ ಸೈನ್ಯಕ್ಕೆ ಅಧಿಕಾರಿಯಾಗಿ ಸೇರ್ಪಡೆಯಾಗುತ್ತಿದ್ದ ಸಂದರ್ಭದಲ್ಲಿ ತನ್ನ ಪೋಷಕರಿಂದ **ಎರಡನೇ ಲೆಫ್ಟಿನೆಂಟ್** ರ್‍ಯಾಂಕನ್ನು ಹೆಗಲಿಗೆ ಏರಿಸಿಕೊಳ್ಳುತ್ತಿರುವ ಪಿಪಿಂಗ್ ಸಮಾರಂಭದ ಸಂತೋಷಕರ ಕ್ಷಣ.


ವಿಳಾಸ :

**ಚಂದನ್**

**S/o ವೈ. ಡಿ. ಕೇಶವಾನಂದ, ಡಿ. ವೈ. ಎಸ್. ಪಿ.**

**ಕಾನ್ವೆಂಟ್ ರೋಡ್, ಮಡಿಕೇರಿ – 571 201**

**ದೂರವಾಣಿ : 08272/28360**



**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771**. And Printed at Sri Guru Raghavendra Printers, 489, Devamba Agrahara, K. R. Mohalla. Mysore - 24. ✆ : 0821/431792.